# ಶ್ರೀ ಸರ್ವಜ್ಞಾಚಾರ್ಯರ ಕಾಲನಿರ್ಣಯ




ವಿಮರ್ಶಕರು

ಸತ್ಯಾತ್ಮದಾಸ ಪಂ. ಚಿಕ್ಕೇರೂರು ಶ್ರೀ ಮುಕ್ಕುಂದಿ ಶ್ರೀಕಾಂತಾಚಾರ್ಯ

ಬಿ.ಇ., (ಮೆಕ್)



ಪ್ರಕಾಶನ

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ, ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್, ಬಸವನಗುಡಿ, ಬೆಂಗಳೂರು-560 004.

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - ೧೮೩

# ಶ್ರೀ ಸರ್ವಜ್ಞಾಚಾರ್ಯರ ಕಾಲನಿರ್ಣಯ




**ವಿಮರ್ಶಕರು**

ಸತ್ಯಾತ್ಮದಾಸ

**ಪಂ. ಚಿಕ್ಕೇರೂರು ಶ್ರೀ ಮುಕ್ಕುಂದಿ ಶ್ರೀಕಾಂತಾಚಾರ್ಯರು,**

ಬಿ.ಇ., (ಮೆಕ್)

**... ಪ್ರಕಾಶನ ...**

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಉತ್ತರಾದಿಮಠ

**ವಿಶ್ವಮಧ್ವಮಹಾಪರಿಷತ್**

ಬಸವನಗುಡಿ, ಬೆಂಗಳೂರು-4.

**Sri Sarvajnacharyara Kalanirnaya....**A review
by Pt. Sri Chikkeruru Mukkundi Srikantacharya.

First Edition : June 2018,

Copies : 500

No. of Pages .44



Cover Page Art & Design :

**Pt. C.M. Srikantachar,** B.E.(Mech)

Price : Rs.25/-

Copies can be had from :

1. **Vishva Madhwa Mahaparishat**
#11, 2nd Floor, Uttaradimath Building
UttaradiMath Road, Shankarpuram,
Basavanagudi, Bangalore-4
Phone : 080 26603692

2. **C.M. Srikantachar**
Phone : 080 26322715

Printed by :
Vagartha, N.R. Colony, Bangalore-19. vagartha@Yahoo.com

# ಆಶೀರ್ವಚನ

**ಶ್ರೀಮತಿ/ಶ್ರೀ ಜಿ.ಎಂ. ಕಾಲವಾಡ**

ಮಲಕಾಜಗಿರಿ, ಹೈದರಾಬಾದ್

ಇವರು ಈ ಪುಸ್ತಕ ಪ್ರಕಾಶನದ ಸಂಪೂರ್ಣ ವೆಚ್ಚವನ್ನು ಭರಿಸಿ ಶ್ರೀ ವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಉತ್ತಮ ಸೇವೆಯನ್ನು ಮಾಡಿದ್ದಾರೆ. ಇವರಿಗೆ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಶ್ರೀಮದಾಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**

ಉತ್ತರಾದಿಮಠ

# ಪೀಠಿಕೆ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಅವತಾರ ಹಾಗೂ ಅದೃಶ್ಯವಾದ ಕಾಲಮಾನಗಳ ಬಗ್ಗೆ ಭಿನ್ನಾಭಿಪ್ರಾಯಗಳಿರುವುದರಿಂದ ಒಂದು ನಿರ್ಣಯಕ್ಕೆ ಬರಲು ಸಾಧ್ಯವಾಗುತ್ತಿಲ್ಲ. ಎಂಬುದು ವಾಸ್ತವದ ಸಂಗತಿ. ಇದುವರೆಗೆ ಅನೇಕ ವಿದ್ವಾಂಸರು ಈ ವಿಷಯದ ಬಗ್ಗೆ ಅವರವರ ಅಭಿಪ್ರಾಯಗಳನ್ನು ಮುಂದಿಟ್ಟಿದ್ದಾರೆ. ತಮ್ಮ ನಿಲುವಿಗೆ ತಕ್ಕ ಆಧಾರಗಳನ್ನು ಕೊಡುವ ಪ್ರಯತ್ನವನ್ನೂ ಮಾಡಿದ್ದಾರೆ. ಆ ಎಲ್ಲ ವಿದ್ವಾಂಸರನ್ನು ಗೌರವಿಸುತ್ತ ನನ್ನ ನಮನಗಳನ್ನು ಸಲ್ಲಿಸುತ್ತೇನೆ. ಇದುವರೆಗೆ ಮಂಡಿಸಿದ ಆ ಎಲ್ಲ ಅಭಿಪ್ರಾಯಗಳನ್ನು ನನ್ನ ಅಧ್ಯಯನದ ಪರಿಮಿತಿಯಲ್ಲಿ ವಿಮರ್ಶಿಸುತ್ತ ನನ್ನ ಅಭಿಪ್ರಾಯವನ್ನು ಮುಂದಿಡುವ ಪ್ರಯತ್ನವನ್ನು ಮಾಡುತ್ತಿದ್ದೇನೆ.

''ಇತರರು ಹೇಳಿದ್ದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದು ಸಂಶೋಧನೆ ಅಲ್ಲ. ಏನಾದರೂ ಹೊಸತನ ಇರಬೇಕು.'' ಪ್ರಸ್ತುತ ವಿಷಯದಲ್ಲಿ ಹೊಸ ಆಧಾರವೇನೂ ದೊರೆತಿಲ್ಲವಾದಕಾರಣ ಇದು ನನ್ನ ಸಂಶೋಧನೆ ಅಲ್ಲವೆಂಬುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಿದ್ದೇನೆ.

ಆದರೆ, ''ಹಿಂದಿನವರು ಚರ್ಚಿಸಿ ಒಂದು ತೀರ್ಮಾನಕ್ಕೆ ಬರಲು ವಿಫಲರಾಗಿದ್ದರೆ ಅಥವಾ ತೀರ್ಮಾನ ಸರಿ ಅಲ್ಲವೆಂದು ತನಗೆ ತೋರಿದರೆ ಆ ಚರ್ಚೆಗಳ ಸಾರಾಂಶ ಹೇಳಿ, ಅವುಗಳಲ್ಲಿನ ದೋಷ ತೋರಿಸಿ, ಅವರಿಗಿಂತ ತಾನು ಎಷ್ಟು ಹೆಜ್ಜೆ ಮುಂದಿಟ್ಟಿದ್ದಾನೆ ಎಂದು ತೋರಿಸುವುದು ಒಬ್ಬ ವಿಮರ್ಶಕನ ಕರ್ತವ್ಯ''. ಈ ಹಿನ್ನೆಲೆಯಲ್ಲಿ ನನ್ನದೊಂದು ಪ್ರಯತ್ನ.

*ಸತ್ಯಾತ್ಮದಾಸ*

**ಚಿ.ಮು.ಶ್ರೀ**

# ಸಂಶೋಧನೆ

ವಿಷಯ ಪ್ರವೇಶದ ಮುಂಚೆ ಸಂಶೋಧನೆ ಬಗ್ಗೆ ಎರಡು ಮಾತುಗಳು.

ಭಾರತೀಯ ಸಂಸ್ಕಾರದ ಹಿನ್ನೆಲೆಯಲ್ಲಿ ನಡೆಸುವ ಸಂಶೋಧನೆಗೂ ಪಾಶ್ಚಾತ್ಯ ಸಂಸ್ಕಾರದ ಹಿನ್ನೆಲೆಯಲ್ಲಿ ನಡೆಸುವ ಸಂಶೋಧನೆಗೂ ಅಜ ಗಜಾಂತರವಿದೆ.

ಪ್ರಾಯಃ ಇಂದಿನ ಸಂಶೋಧನೆಗಳೆಲ್ಲ ಪಾಶ್ಚಾತ್ಯ ಸಂಸ್ಕಾರಗಳ ಪ್ರಭಾವ ದಡಿಯಲ್ಲಿ ನಡೆವ ಸಂಶೋಧನೆಗಳೆಂದು ಹೇಳಬಹುದು. ಪಾಶ್ಚಾತ್ಯರ ಸಂಶೋಧನೆಯ ರೀತಿಯಲ್ಲಿ ದೋಷಗಳಿವೆ ಎಂದು ನನ್ನ ಅಭಿಪ್ರಾಯವಲ್ಲ. ಆದರೆ ಪಾಶ್ಚಾತ್ಯರ ಸಂಶೋಧನೆಗಳಲ್ಲಿ ಆಯಾ ದೇಶ, ಕಾಲ, ಸಂಸ್ಕೃತಿ ಹಾಗೂ ಸಂಸ್ಕಾರಗಳ ಹಿನ್ನೆಲೆ ಒಂದಕ್ಕೊಂದು ಪೂರಕವಾಗುವ ಸಂಭವ ಅತ್ಯಂತ ವಿರಲ. ಕೆಲವೊಮ್ಮೆ ವಿರುದ್ಧವಾಗುವ ಸಂಭವವೂ ಉಂಟು.

ಇಂದು ಸಂಶೋಧನೆ ಶಬ್ದ ಎಲ್ಲೆಡೆ ಕೇಳಿಬರುತ್ತಿದೆ. ಸಂಶೋಧಕರ ಸಂಖ್ಯೆ ಹೆಚ್ಚುತ್ತಿದೆ. ವಿವಿಧ ಕ್ಷೇತ್ರಗಳಲ್ಲಿ ಸಂಶೋಧನೆಗೆ ಅವಕಾಶವಿದೆ. ಅಂತೆಯೇ ನಾ ಮುಂದು ತಾ ಮುಂದು ಎಂಬಭರಾಟೆ ಎದುರಾಗಿದೆ, ಕೇವಲ ಡಾಕ್ಟ್ರೇಟ್ ಪಡೆದು ಮರೆಯಬೇಕೆಂಬ ಹಂಬಲ ಹೆಚ್ಚಾಗಿ ಮೂಲೋದ್ದೇಶ್ಯ ಮರೆ ಯಾಗುತ್ತಿದೆ. ಸಂಶೋಧಕನಿಗೆ ಇರಬೇಕಾದ ಲಕ್ಷಣ, ಗುಣ, ಅರ್ಹತೆಗಳು ಕಡಿಮೆ ಆಗಿ ಸ್ವಾರ್ಥಸಾಧನೆ ಹೆಚ್ಚಾಗಿದೆ.

'ಸಂಶೋಧನೆ' ಎಂದರೆ ಅನ್ವೇಷಣೆ, ಹುಡುಕು ಎಂಬ ಅರ್ಥವೇ ಈಗ ಪ್ರಬಲವಾಗಿಬಿಟ್ಟಿದೆ. ಆದರೆ ಸಂಶೋಧನೆ ಎಂದರೆ, ಸಮ್ಯಕ್ ಶೋಧನೆ. ಶೋಧನೆ ಎಂದರೆ ಶುದ್ಧಿಗೊಳಿಸು ಅಥವಾ ತಿದ್ದು ಎಂದರ್ಥ. ಈ ಹಿನ್ನೆಲೆಯಲ್ಲಿ ಹುಡುಕುವುದು ಅಥವಾ ಅನ್ವೇಷಣೆ ಅನಿವಾರ್ಯವಾಗುತ್ತದೆ. ಕೇವಲ ಹುಡುಕುವುದೇ ಸಂಶೋಧನೆ ಅಲ್ಲ. ಆಧಾರಗಳು ಸಿಕ್ಕರೂ ಸತ್ಯ ಸಿಗುತ್ತದೆ ಎಂದಿಲ್ಲ.

ಸಂಶೋಧನೆ ಎಂಬ ರಥಕ್ಕೆ ನಾಲ್ಕು ಚಕ್ರಗಳಿವೆ. ಸಾಮಗ್ರಿಸಂಗ್ರಹ (collection of data) ವೀಕ್ಷಣೆ (Angle of view), ಊಹೆ (Inference) ಮತ್ತು ಪ್ರಯೋಗ (Application or practicality) ಹಲವರು ಮೂರು ಅಥವಾ ಎರಡೇ ಚಕ್ರಗಳ ಮೇಲೆ ತಮ್ಮ ಸಂಶೋಧನವೆಂಬ ರಥ ಓಡಿಸುವ ಪ್ರಯತ್ನ ಮಾಡುತ್ತಾರೆ. ಅದೇ ದೊಡ್ಡಸಾಧನೆ ಎಂಬ ಹೆಮ್ಮೆ ಬೇರೆ! ಇನ್ನು ಕೆಲ ಪ್ರಸಿದ್ಧ ಸಂಶೋಧಕರು ಒಂದೇ ಚಕ್ರದ ಮೇಲೆ ಓಡಿಸುವ ಸಾಹಸವನ್ನು ಮಾಡಿ ಸಮಾಜದ ಬಹುತೇಕ ಶಾಂತಿಯನ್ನು ಹಾಳು ಮಾಡುತ್ತಾರೆ.

ಒಬ್ಬ ಸಂಶೋಧಕ ಭಾವುಕನಾಗಬಾರದು. ವೈಯಕ್ತಿಕ ಅನ್ನಿಸಿಕೆ ಕಲ್ಪನೆಗಳಿಗೆ ಸಂಶೋಧನೆಯಲ್ಲಿ ಬೆಲೆ ಇಲ್ಲ. ಆಧಾರಗಳ ಅಗತ್ಯ ಉಂಟು. ಕೇವಲ ಆಧಾರಗಳ ಮೂಲಕವೇ ಸತ್ಯ ಸಿಗುತ್ತದೆ ಎನ್ನುವಂತಿಲ್ಲ. ತಾತ್ಕಾಲಿಕ ಸಿದ್ಧಾಂತದ ಕಲ್ಪನೆಗೆ ಸಹಾಯವಾಗಬಲ್ಲುದಷ್ಟೆ.

ಆದಕಾರಣ ವಸ್ತುನಿಷ್ಠವಾದ ಮತ್ತು ಆತ್ಮನಿಷ್ಠವಾದ ಸತ್ಯವನ್ನು ಹುಡುಕುವುದು ಸಂಶೋಧನೆ ಎಂದೆನಿಸಿಕೊಳ್ಳುತ್ತದೆ. ವಸ್ತುನಿಷ್ಠ ಸಂಶೋಧನೆ ಯನ್ನು ಪ್ರತ್ಯಕ್ಷಸಂಶೋಧನೆ ಎಂದು, ಆತ್ಮನಿಷ್ಠ ಸಂಶೋಧನೆಯನ್ನು ಪರೋಕ್ಷ ಸಂಶೋಧನೆ ಎಂದು ಕರೆಯ ಬಹುದಾಗಿದೆ. ಈ ಎರಡರಲ್ಲೂ ಪ್ರಾಮಾಣಿಕತೆ ಅತ್ಯವಶ್ಯಕವಾಗಿದೆ. ಆದರೆ, ನಾನು, ನನ್ನದು, ನನ್ನವರು ಎಂಬ ದುರಭಿಮಾನ ಪ್ರಾಮಾಣಿಕರಾಗಿ ಉಳಿಯಲು ಬಿಡುವುದಿಲ್ಲ. ಅಂತೆಯೇ ಅವಸರ ಅವಸರದಲ್ಲಿ ಬಲಾತ್ಕಾರವಾಗಿ ನಿರ್ಣಯಕೊಡುವ ಸಂಶೋಧಕರ ಸಂಖ್ಯೆ ಹೆಚ್ಚು. ಇದರಿಂದ ತಿಳಿಯಾದ ವಾತಾವರಣ ಸಾಧ್ಯವಿಲ್ಲ. ಸತ್ಯದ ದಾರಿ ಸುಲಭವಲ್ಲ. ಅದು ಸಿಗುವುದೂ ಇಲ್ಲ.

ಕುದುರೆಯನ್ನು ಹಲವಾರು ಚಾವಟಿ ಏಟುಗಳಿಂದ ಬಳಸಿಕೊಳ್ಳುವುದಕ್ಕೂ ಪ್ರೀತಿಯಿಂದ ಅದನ್ನು ಸ್ಪರ್ಶಿಸಬೇಕಾದ ಸ್ಥಳಗಳಲ್ಲಿ ಸ್ಪರ್ಶಿಸಿ (ಅಶ್ವವಿದ್ಯೆ ಬಲ್ಲ ನಳಮಹಾರಾಜನ ಕಥೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ)

ಬಳಸಿಕೊಳ್ಳುವುದಕ್ಕೂ ತುಂಬಾ ವ್ಯತ್ಯಾಸವಿದೆ. ಸಂಶೋಧನೆ ಎಂಬ ಕುದುರೆಯನ್ನು ಚಾವಟಿ ಏಟುಗಳಿಂದ ತಮಗೆ ಬೇಕಾದಂತೆ ಬಳಸಿಕೊಳ್ಳುವ ಯಜಮಾನರೇ ಹೆಚ್ಚು. ತಾನು ಯಜಮಾನ ಎಂಬ ಅಹಂಕಾರವೇ ಇದಕ್ಕೆ ಮೂಲ. ಆದರೆ ಆ ಕುದುರೆ ಒಮ್ಮೆ ಯಜಮಾನನನ್ನೇ ಕೆಳಗುರುಳಿಸುವುದು ಖಚಿತ. ಅದೇ ಸಂಶೋಧನೆ ಎಂಬ ಕುದುರೆಯನ್ನು ಪ್ರೀತಿಯಿಂದ ತಟ್ಟಿದರೆ ಅದರ ವೇಗ, ಲಾಭದ ಅನುಭವ ವರ್ಣಿಸುವುದು ಅಸಾಧ್ಯ. ಹೆಚ್ಚಿನ ವಿಚಾರಗಳುಂಟು. ಸದ್ಯಕ್ಕೆ ಸಾಕು.

ಇಷ್ಟು ಹಿನ್ನೆಲೆಯಲ್ಲಿ ವಿಷಯ ಪ್ರವೇಶ ಮಾಡುತ್ತಿದ್ದೇನೆ. ವಿದ್ವಾಂಸರು ಅನುಗ್ರಹಿಸಬೇಕು.

# ಕಾಲನಿರ್ಣಯ ವಿಮರ್ಶೆ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಅವತಾರ ಹಾಗೂ ಅದೃಶ್ಯರಾದ ಕಾಲದ ಬಗ್ಗೆ ವಿಭಿನ್ನ ಆಧಾರಗಳು ಸಿಗುತ್ತವೆ. ಅಂಕಿ ಅಂಶಗಳ, ಸಂವತ್ಸರಗಳ ಮಾಸ ಹಾಗೂ ತಿಥಿ-ವಾರಗಳ ಬಗ್ಗೆಯೂ ಭಿನ್ನ ಭಿನ್ನ ಆಧಾರಗಳುಂಟು.

## ೧. ಪ್ರಾಚೀನ ಆಧಾರಗಳು ಮತ್ತು ಉಲ್ಲೇಖಗಳು :

**ಅ) ಋಗ್ವೇದದ ೧೪೦ ನೇ ಸೂಕ್ತದ ೨ನೇ ಋಕ್ -**

अभिद्विजन्मा त्रिवृदन्नमृज्यते
संवत्सरे वावृधे जग्धमीपुनः ।
अन्यस्यासा जिह्वया जेन्ये वृषा
न्यन्येन वनिनो मृष्टवारणः ।। १ - १४०-२

**ಪೂರ್ವಾರ್ಧದ ಭಾವಾರ್ಥ :** ದೇವಮಾನದ ೧೨ನೇ ವರ್ಷದಲ್ಲಿ ಆ ವಾಯುವು (ಭೀಮಸೇನ ದೇವರು) ಮತ್ತೆ ಬ್ರಾಹ್ಮಣರಾಗಿ ಭೂಮಿಯಲ್ಲಿ ಅವತರಿಸಿ ಅನ್ನನಾಮಕನಾದ ಶ್ರೀಹರಿಯ ಗುಣ ಪೂರ್ಣತ್ವವನ್ನು ಪ್ರತಿಪಾದಿಸುವರು. (೩೬೦×೧೨=೪೩೨೦ ಮನುಷ್ಯ ಮಾನದ ವರ್ಷಗಳು)

ಆ) **ವಾಯುಪುರಾಣೋಕ್ತ ಅಣುಮಧ್ವ ಚರಿತ -** (ಹೃಷೀಕೇಶ ತೀರ್ಥರ ಹಸ್ತ ಲಿಖಿತ ತಾಳೆಗರಿಯಲ್ಲಿ ಹಾಗೂ ಇನ್ನಿತರ ಪ್ರಾಚೀನರೂ ಇದರ ಉಲ್ಲೇಖ ಮಾಡಿದ್ದಿದೆ ಎಂದು ಹೇಳುವುದುಂಟು).

त्रिशताब्दोत्तर चतुसहस्राब्देभ्यउत्तरे ।
एकोनविंशतितमे विलम्बिपरिवत्सरे ।
आश्वीन शुक्ल दशमी दिवसे भुवि पावने ।
पाजकाख्ये शुचिक्षेत्रे दुर्गयाचाभिवीक्षते ।
जातो मध्याह्नवेलायां बुधवारे मरुत्तनुः ।।

೪೦೦೦ + ೩೦೦ + ೧೯ = ೪೩೧೯.

'एकोनचत्वारिंशब्दे' ಎಂಬ ಪಾಠಪ್ರಕಾರ ೪೩೩೯.

ಇ) ಮಹಾಭಾರತ ತಾತ್ಪರ್ಯ ನಿರ್ಣಯ

चतुः सहस्रे त्रिशतोत्तरे गते
संवत्सराणां तु कलौ पृथिव्याम् ।
जातः पुनर्विप्रतनुः स भीमः
दैत्यैर्निगूढं हरितत्वमाह ।।

ಆ ಭೀಮಸೇನ ದೇವರೇ ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷಗಳು ಕಳೆದ ಮೇಲೆ ಪುನಃ ಬ್ರಾಹ್ಮಣರಾಗಿ ಹುಟ್ಟಿ ದೈತ್ಯರಿಂದ ಮರೆಮಾಡಲ್ಪಟ್ಟ ಹರಿತತ್ವವನ್ನು ಉಪದೇಶಿಸಿದರು. (೪೩೦೦ರ ನಂತರ)

**ಈ) ಶ್ರೀವೈಶ್ವನಾಥೀಯ ನಾರಾಯಣ ಪಂಡಿತಾಚಾರ್ಯ ವಿರಚಿತ ಶ್ರೀಮನ್ಮಧ್ವಮಂತ್ರಾರ್ಥ ಮಂಜರೀ** – (ಕಾಲ ೧೬೦೦-೧೬೬೦)

(ಇವರು ಶ್ರೀಉತ್ತರಾದಿಮಠದವರು. ಶ್ರೀರಘೂತ್ತಮತೀರ್ಥರ, ಶ್ರೀವೇದವ್ಯಾಸತೀರ್ಥರ ಹಾಗೂ ಶ್ರೀವಿದ್ಯಾಧೀಶತೀರ್ಥರ ಶಿಷ್ಯರು.

ಪ್ರಸಿದ್ಧವಾದ ''ಅದ್ವೈತಕಾಲಾನಲ'' ಎಂಬಗ್ರಂಥದಲ್ಲಿ ''ಮಧ್ವಮಂತ್ರಾರ್ಥ ಮಂಜರೀ'' ಗ್ರಂಥದ ಉಲ್ಲೇಖವೂ ಕಂಡು ಬರುತ್ತದೆ. ಹೀಗಾಗಿ ಅದ್ವೈತ ಕಾಲಾನಲ, ಮಧ್ವಮಂತ್ರಾರ್ಥಮಂಜರೀ, ವಿಷ್ಣುತತ್ವವಿವೇಕ ಈ ಮೂರೂ ಗ್ರಂಥಗಳು ಇವರಿಂದಲೇ ರಚಿತವಾದವುಗಳು. ''ಅದ್ವೈತ ಕಾಲಾನಲ'' ಎಂಬ ಗ್ರಂಥದಲ್ಲಿ ಶ್ರೀ ರಘೂತ್ತಮತೀರ್ಥರನ್ನು ಶ್ರೀ ವೇದವ್ಯಾಸ ತೀರ್ಥರನ್ನು ಹಾಗೂ ಶ್ರೀ ವಿದ್ಯಾಧೀಶ ತೀರ್ಥರನ್ನು ಸ್ತೋತ್ರ ಮಾಡಿದ್ದಾರೆ. ಆದರೆ, ಪ್ರಕೃತ ಮಧ್ವಮಂತ್ರಾರ್ಥ ಮಂಜರೀಯಲ್ಲಿ ಕೇವಲ ಶ್ರೀ ವೇದವ್ಯಾಸ ತೀರ್ಥರನ್ನು ಸ್ತೋತ್ರ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಕೆಲ ವಿದ್ವಾಂಸರು ಭಿನ್ನ ಅಭಿಪ್ರಾಯ ಹೊಂದಿ, ಬೇರೆ ಬೇರೆ ವ್ಯಕ್ತಿಗಳ ಕೃತಿಗಳೆಂದು ತಿಳಿಸಿದ್ದಾರೆ.)

ಈ ಆಧಾರಕ್ಕೆ ನನಗೆ ಮೂಲ ಡಾ|| ಕಾನಾಲ ನಲಚಕ್ರವರ್ತಿಗಳು ತಂಜಾವೂರಿನ ಅರಮನೆಯ ಹಸ್ತಪ್ರತಿಗಳ ಗ್ರಂಥಾಲಯದಲ್ಲಿದ್ದ ಈ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದ ವೈಶ್ವನಾಥೀಯನಾರಾಯಣಾಚಾರ್ಯ ಕೃತ ಶ್ರೀ ಮಧ್ವಮಂತ್ರಾರ್ಥಮಂಜರೀ ಎಂಬ ಪುಸ್ತಕ. ಇದು ಶ್ರೀವೆಂಕಟಾಂಬಾ ಪಬ್ಲಿಕೇಶನ್ಸ್ ತಿರುಪತಿ, ಇವರಿಂದ ಪ್ರಕಟಿತ. ಕ್ರಿ.ಶ.೧೯೯೫ರಲ್ಲಿ ಪ್ರಕಟಿಸಲ್ಪಟ್ಟಿದೆ. ಈ ಪುಸ್ತಕದಲ್ಲಿದ್ದಂತೆ ನಾನು ತೆಗೆದುಕೊಂಡಿದ್ದೇನೆ.

अभिद्विजन्मा त्रिवृदन्नमृज्यते
संवत्सरे वावृधे जग्धमी पुनः ।

ಎಂಬ ಋಗ್ವೇದ ಮಂತ್ರಕ್ಕೆ ಇವರ ವ್ಯಾಖ್ಯಾನದ ಹಿನ್ನೆಲೆಯಲ್ಲಿ ಅರ್ಥ ಹೀಗಿದೆ -

अभि = अभ्यर्हितः ब्राह्मणादि वर्णानां मध्ये श्रेष्टे ब्राह्मण जन्मनि स यदा, द्विजन्मा = उपनीतः सन्, त्रिवृत् = संवत्सर सन्निधानात् त्रिभिः वत्सरैः सह वर्तमानो भवति तस्मिन् संवत्सरे वत्सरे अतीते सति ।

यद्वा त्रिवृत् - तृतीयवर्णो वैश्यः । स यदा द्विजन्मा भवति तस्मिन् संवत्सर इति योजना । अस्मिन् पक्षे अतीते सतीति शेषोपि नास्ति, द्वादशो वैश्यमित्युक्तत्वात् अन्यस्य प्राग्वत् ।

अन्नं = नारायणं वावृध = गुणपूर्णत्वेन प्रतिपादयतिस्म ।

'अष्टवर्षं ब्राह्मणमुपनेयेत्' इति वचनात् अष्टवर्षे द्विजन्मा सन् त्रिवर्षे अतीते, एकादशाब्देऽतीते सति दिव्ये द्वादशाब्दस्य मध्ये इति यावत् ।

**ತಾತ್ಪರ್ಯ :-** 'ಅಭಿ' ಎಂದರೆ ವರ್ಣಗಳಲ್ಲಿ ಪೂಜಿತವಾದ ಬ್ರಾಹ್ಮಣ ವರ್ಣದಲ್ಲಿ 'ಪುನಃ' ಆ ಭೀಮಸೇನ ದೇವರು

'ದ್ವಿಜನ್ಮಾ' - ಉಪನಯನವಾದ ನಂತರ ದ್ವಿಜನ್ಮತ್ವವನ್ನು ಪಡೆದು ''ಸಂವತ್ಸರೇ ತ್ರಿವೃತ್'' - ಉಪನಯನವಾದ ಮೂರು ವರ್ಷಗಳ ನಂತರ ('ಅಷ್ಟವರ್ಷಂ ಬ್ರಾಹ್ಮಣಉಪನೇಯೇತ್' ಎಂಬ ಶೃತ್ಯನುಗುಣವಾಗಿ ಅಂದರೆ, ೮+೩=೧೧ ಅದು ಕಳೆದ ಮೇಲೆ ಅಂದರೆ ೧೨ನೇ ವರ್ಷದಲ್ಲಿ). 'ಅಭಿಸಂವತ್ಸರೇ ತ್ರಿವೃತ್' - ಅಭ್ಯರ್ಹಿತವಾದ' ಮನುಷ್ಯಮಾನಕ್ಕಿಂತ ಹೆಚ್ಚು ಪೂಜ್ಯವಾದ ದೇವತೆಗಳ ಕಾಲಮಾನದ ಕ್ರಮದಲ್ಲಿ ಹನ್ನೆರಡನೆಯ ವರ್ಷದಲ್ಲಿ (ನಮಗೆ ೧ ವರ್ಷ ದೇವತೆಗಳಿಗೆ ೧ ದಿನ, ಹೀಗಾಗಿ ದೇವಮಾನದ ೧ ವರ್ಷ ಮನುಷ್ಯ ಮಾನದ ೩೬೦ ವರ್ಷ). 'ದಿವ್ಯ' ದೇವಮಾನದ ದ್ವಾದಶ ವರ್ಷಗಳೆಂದರೆ ೩೬೦ ಜ ೧೨ = ೪೩೨೦ ಮನುಷ್ಯಮಾನದ ವರ್ಷಗಳು) ಅಂದರೆ ಮನುಷ್ಯಮಾನದ ೪೩೨೦ ವರ್ಷದ ಅವಧಿಯಲ್ಲಿ ಅವತರಿಸಿ, 'ಅನ್ನಂ ವಾವೃಧೇ' - ಅನ್ನನಾಮಕ ಪರಮಾತ್ಮನನ್ನು ಪ್ರತಿಪಾದಿಸಿದರು.

ಇವರು ಹೀಗೆ ಅರ್ಥೈಸಲು अन्यानि वाक्यानि च वैदिकानि .... ಎಂಬ ಮ.ಭಾ.ತಾ.ನಿ. ವಾಕ್ಯ ಮೂಲವಾಗಿದೆ. ಅಲ್ಲದೆ, ಮ.ಭಾ.ತಾ.ನಿ.ಯ ದ चतुः सहस्रे त्रिशतोत्तरे गते ಎಂಬವಾಕ್ಯದಲ್ಲಿ ಶ್ರೀಮದಾಚಾರ್ಯರು ಇದೇ ಅಭಿಪ್ರಾಯದಿಂದ ಹೇಳಿದ್ದಾರೆಂದು ತಿಳಿಸಿರುತ್ತಾರೆ.

ಮೂಲ ವ್ಯಾಖ್ಯಾನ : अभि अभ्यर्हितः वर्णत्रये ब्राह्मण इत्यर्थः । स यदा द्विजन्मा उपनीतसन् त्रिवृत् संवत्सर सन्निधानात् त्रिभिर्वत्सरैः सहवर्तमानो भवति । तस्मिन् संवत्सरेऽतीते सति, अन्नं ब्रह्म वावृधे गुणपूर्णत्वेन प्रतिपादयतिस्मेति योजना, अष्टवर्षं ब्राह्मणमुपनयेदिति श्रुते रष्टमे वर्षे द्विजन्मासन् त्रिभिर्वर्षैर्युक्त एकादशेवर्षे जायन्ते, तथा चेकादशेब्देऽतीते स दिव्ये द्वादश वर्ष मध्य इत्यर्थो लभ्यते, तत्र चैकादश इति स्फुटमनुक्त्वा वक्रनिर्देशः कुतः स च 'परोक्षप्रिया इव हि देवा' इति श्रुतिदेवताप्रियः तथा च देवप्रियाएकादश संवत्सरा अत्राभिमता इति गम्यते । अभीत्यस्याभ्यर्हितार्थकस्य संवत्सर इत्यनेनान्वयाद्वाततश्च मनुष्यमानापेक्षया देवमानस्यैव योग्यतया ग्रहणम् तेन दिव्य द्वादशाब्दानां मानुषमानेन विंशत्यधिक त्रिचत्वारिंशाच्छतं वर्षाणि भवन्ति । तन्मध्य एवास्यावतारो न तु तदात्यये । यद्वा त्रिवृत् तृतीयवर्णो वैश्यः । स यदा द्विजन्माभवति तस्मिन् संवत्सर इति योजना । अस्मिन् पक्षे अतीते सतीति शेषोपि नास्ति, द्वादशो वैश्यमित्युक्तत्वात् अन्यस्य प्राग्वत्। मानुषाब्दं हि देवानां दिनं ततश्चदिव्याब्दस्य मानुषमानेन षष्ट्यधिक त्रिंशत्येतस्यां द्वादशगुणायां (४३२०) विंशत्यधिकत्रिचत्वारिंशाच्छत्या द्वादशाब्दा-वसानं तन्मध्येऽस्य जन्मेत्युक्तं भवति । तदिदमाहुः चतुस्सहस्रे

त्रिशतोत्तरेगते संवत्सराणां तु कलौ पृथिव्याम् । जातः पुनर्विप्रतनु-स्सभीमो दैत्यैर्निगूढं हरितत्वमाहिति ।

ಉ) **ಸ್ಮೃತ್ಯರ್ಥಸಾಗರ (ಶ್ರೀ ಛಲಾರೀ ನರಸಿಂಹಾಚಾರ್ಯರು)**

कलौप्रवृत्ते बौद्धादिमतं रामानुजं तथा ।

शकेह्येकोनपञ्चाशदधिकाब्दसहस्रकेनिराकर्तुं मुख्यवायुं सन्मत-स्थापनाय च एकादशशते शके विंशत्यष्ट्युगे गते ೧೦೦೦ + ೨೮ = ೧೦೨೮ (ಶಕೆ) = ಕ್ರಿ.ಶ. ೧೨೦೭.

विंशत्यब्द्युगे गते ಎಂಬ ಪಾಠದಂತೆ ೧೦೦೦ + ೨೦ = ೧೦೨೦ (ಶಕೆ) = ಕ್ರಿ.ಶ. ೧೧೯೯.

अवतीर्णं मध्वगुरुं सदा वन्दे महागुणम् - ಕಾಲತರಂಗ ಶ್ಲೋ.೨,೩

ಊ) **ಶ್ರೀವಾಯುಪುರಾಣೋಕ್ತ ಶ್ರೀಮಧ್ವಾವತಾರ ಮಹಿಮಾ ವರ್ಣನಂ** (ಪ್ರಕಾಶಕರು : ಅ.ರಾ. ಪಂಚಮುಖಿ – ೧೯೯೯)

प्रभञ्जनस्तस्य पत्न्यां जातवत्सव्यरोचतः ।
विलम्बिवत्सरे शुद्धे माघे मकरगे रवौ ।। ३२ ।।

सप्तम्यां रविवारे तु सुनक्षत्रे शुभेदिने ।
द्वत्रिंशल्लक्षणैर्युक्तः तेजोमयवपुस्तदा ।। ३३ ।।

**ಅವತಾರ :** ವಿಲಂಬಿ ಸಂವತ್ಸರ ಮಾಘ ಶುಕ್ಲ ಸಪ್ತಮಿ ಭಾನುವಾರ (ಕ್ರಿ.ಶ.೧೨೩೮)

**ಎ) ಗುರುಚರ್ಯಾ (ಪ್ರಾಯಃ ಶ್ರೀಉತ್ತರಾದಿಮಠದ ಶ್ರೀಸತ್ಯಸಂಧ ತೀರ್ಥರ ಕಾಲದ್ದು)**

चतु:सहस्र सहित (त्रि)द्विशतेनयुतादथा चतुर्विंशति वर्षात्तु कलिकालात् सहस्रकात्। सनवत्रिंशतो शालिवाहनस्याप्यनन्तरम् विलम्बिवर्ष वैशाखे कर्के ग्रे सुमङ्गले अक्षय्याया तृतीयायां अनेक व्रततोषितः मध्यगेहाख्य भट्टस्य कुलेऽत्रावतरत्विभुः ।

ಅವತಾರ ಕಾಲ : ೪೦೦೦ + ೨೦೦ + ೨೪ = ೪೨೨೪ = ಕ್ರಿ.ಶ. ೧೧೨೪

ಶಾ.ಶ. ೧೦೦೦ + ೩೯ = ೧೦೩೯ + ೭೯ = ಕ್ರಿ.ಶ. ೧೧೧೮

ವೈಶಾಖ ಮಾಸ ಅಕ್ಷಯ ತೃತೀಯ

**ಬಿ) ಪೂರ್ಣಬೋಧ ಗುರುವಂಶ ಕಥಾಕಲ್ಪತರು** - (ದೈವಜ್ಞ ಭೀಮಾಚಾರ್ಯರು, ಶ್ರೀ ಉತ್ತರಾದಿಮಠದ ಶ್ರೀ ಸತ್ಯಬೋಧತೀರ್ಥರ ಕಾಲ)

कलेगते नव कु ब्राह्म (बाहु) समुद्र तुल्य वर्षैर्मिते (शक ४२१९) कलियुगागमनाच्चतत्र श्री शालिवाहन नृप भुक्त ख वेद शून्यम् चन्द्रोन्मितादि (शक.१०४०) निचयरजनीशमानात् ।। २१ ।। (चन्द्रे २०४०) र्मिताब्दिनिचयेरजनीशमानात्) रेवानदीयामदिशीह विलम्बि वर्षे मासे त्विषेऽथ विजयाभिह्यसद्दशम्याम् ।

क्षेत्रेषु पाजक इति प्रथितेऽपि पुण्ये भूसुरेन्द्र वनिता सुषुवे कुमारम् ।। २२ ।।

ಅವತಾರ ಕಾಲ :

(बाहु) ೪೨೯ = ಕ್ರಿ .ಶ. ೧೧೯
ಅಥವಾ ब्राह्म ೪೩೯ = ಕ್ರಿ .ಶ. ೧೨೯ (೧೨೨೦)
ಶಾ.ಶ. ೧೦೪೦ = ಕ್ರಿ .ಶ. ೧೧೯
ವಿಲಂಬಿ ಸಂವ. (ಆಶ್ವೀಜ) ವಿಜಯ ದಶಮೀ

**ಐ) ಶ್ರೀ ರಾಯರ ಮಠದ ''ಶ್ಯಾಮಲ್'' ಕೋರೀ ರಂಗದ ದಾಖಲೆ :-**

– ಪಂ. ಶ್ರೀ ಆರ್.ಎಸ್. ಪಂಚಮುಖಿಯವರು 'ಹರಿದಾಸಸಾಹಿತ್ಯ ಪುಸ್ತಕದ ಪುಟ ೨೭೪ರಲ್ಲಿಯ (ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೫೨ರಲ್ಲಿ ಪ್ರಕಾಶಿತ) ಉಲ್ಲೇಖ ಹೀಗಿದೆ –

''ಮಠದ ಪೀಳಿಗೆಗಳಲ್ಲಿ ವಿಲಂಬಿ ಪಿಂಗಳಗಳು ಮಾತ್ರ ಕೊಡಲ್ಪಟ್ಟಿದ್ದು ಶಶಾಂಕಗಳು ಹಿಂದುಗಡೆ ಸೇರಿಸಲ್ಪಟ್ಟಿವೆ. ಇದಲ್ಲದೆ ಎಲ್ಲ ಮಠಗಳಲ್ಲಿ ಈ ವಿಷಯದಲ್ಲಿ ಏಕರೂಪತೆ ಇಲ್ಲ. ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ''ಶ್ಯಾಮಲ್'' ಎಂಬ ಕೋರೀ ಕಾಗದದ ಮೇಲೆ ಬರೆಯಲ್ಪಟ್ಟ ಹಳೆಯ ಹೊತ್ತಿಗೆಯಲ್ಲಿ ಮಧ್ವಾಚಾರ್ಯರು ಶಕ ೧೧೯೫ ಆನಂದ ಸಂವತ್ಸರದಲ್ಲಿ ಅವತರಿಸಿ ರೌದ್ರಿಯಲ್ಲಿ ಉಪನಯನ ಮಾಡಿಕೊಂಡು ಪ್ರಭವದಲ್ಲಿ ಸಂನ್ಯಾಸವನ್ನು ತೆಗೆದುಕೊಂಡು ೪೦ ವರ್ಷಗಳ ನಂತರ ಪ್ಲವಂಗದಲ್ಲಿ ಮೊದಲು ಬದರಿಕಾಶ್ರಮಕ್ಕೆ ಹೋದರೆಂದು ಬರೆದಿದೆ. ಇದು ಯಾವುದಕ್ಕೂ ಸರಿ ಆಗುವುದಿಲ್ಲ. ಆದ್ದರಿಂದ ಮಠದಲ್ಲಿದ್ದ ಪೀಳಿಗೆಗಳ ಮೇಲೆ ಭಾರ ಹಾಕಿ ಕಾಲ ನಿರ್ಣಯ ಮಾಡುವುದು ಯುಕ್ತವಲ್ಲ. ಇವುಗಳಲ್ಲಿ ಪರಸ್ಪರ ವ್ಯತ್ಯಾಸಗಳಿರುವುದಲ್ಲದೆ ವಿಳಂಬಿ ಪಿಂಗಳಾದಿ ಸಂವತ್ಸರ ನಾಮ ನಿರ್ದೇಶನದಲ್ಲೂ, ಯತಿಗಳು ಜಗದ್ಗುರು ತಟ್ಟವನ್ನು ಆಳಿದ ವರ್ಷಗಳ ಅಂಕಿಗಳಲ್ಲಿಯೂ ಐಕಮತ್ಯವಿಲ್ಲ. ಇನ್ನು ಮ.ಭಾ.ತಾ.ನಿ.ಯದ ಶ್ಲೋಕವನ್ನು ಪ್ರಕ್ಷಿಪ್ತವೆಂದು ತಿಳಿಯುವುದು ಯುಕ್ತವಲ್ಲ''.

ಅವತಾರ ಕಾಲ : ಶ.ಕ. ೧೧೯೫ = ಕ್ರಿ .ಶ. ೧೧೭೪
ಆನಂದ ಸಂವತ್ಸರ
ಉಪನಯನ : ರೌದ್ರಿ ಸಂ.
ಮೊದಲ ಬಾರಿ ಬದರೀ ಗಮನ : ಪ್ಲವಂಗ ಸಂ.
''ಶ್ಯಾಮಲ್'' ಕೋರೀ ಕಾಗದದ ಕಾಲ ೧೫ ರಿಂದ ೧೭ನೇ ಶತಮಾನ.

**ಒ) ಶ್ರೀರಾಯರ ಮಠದ ಪ್ರಾಚೀನ ತಮ ಕಲ್ಲಚ್ಚಿನ ದಾಖಲೆ -**

ಅದೃಶ್ಯರಾದ ಕಾಲ : ಶಾ.ಶಕೆ. ೧೧೯೦ ವಿಭವ = ಕ್ರಿ .ಶ. ೧೨೬೯
ಅರ್ಥಾತ್‌ಅವತಾರ ಕಾಲ ೧೨೬೯-೭೯ = ಕ್ರಿ .ಶ. ೧೧೯೦

**ಓ) ಶ್ರೀ ಪುರಂದರ ದಾಸರ ಕೀರ್ತನೆ (?!)**

(ಶ್ರೀ ನರಹರಿ ತೀರ್ಥರ ಕುರಿತು):

**''ನರಹರಿ ತೀರ್ಥರ ಮಹಿಮೆ ಕೇಳಿರೋ'' ॥ ಪ ॥**

**ಆ ದೇಶ ಪದವಿ ಹನ್ನೆರಡೊರುಷ ಮೂರು ಮಾಸ**
**ಮೋದದಿಂದನುಭವಿಸಿ ರಾಜ ಪದವ ।**
**ಸಾದರದಿ ಪಿಂಗಳಾಶ್ವಿಜ ಶುದ್ಧ ಸಪ್ತಮಿ**
**ಆ ಧರೆಯ ರಾಜಪುತ್ರಗೆ ಇತ್ತ ಮಹಿಮಾ ॥ ೪ ॥**

**ರಾಜ ಪುತ್ರ ಪತ್ನಿ ನಿಮಗೆ ಬೇಕಾದ ವಸ್ತು ವೈವದೆನಲು**
**ಆ ಜನಪನ ಕೋಶದಲಿ ಮಂದಾಸನದೊಳು ।**
**ರಾಜಿಸುತಿಪ್ಪ ಸೀತಾರಾಮಮೂರ್ತಿಗಳನು ತೆಗೆದುಕೊಂಡು**
**ವಾಜಿಯನೇರಿ ಕೂರ್ಮಕ್ಕೆ ಬಂದು ಪದ್ಮನಾಭರಿಗಿತ್ತರು ॥ ೫ ॥**

**ಪದುಮನಾಭಯತಿ ತಾನು ದಶಮತಿಗೆ ಅರ್ಪಿಸಲು**
**ಮುದದಿ ಮೂರು ಮಾಸ ಹದಿನಾರು ದಿನವು ।**

**ಮದನನಯ್ಯನ ಪೂಜಿಸಿ ಕೊಡಲು ತಾಂ ಪೂಜಿಸಿದ**
**ಒದಗಿ ಆರು ವರುಷ ಇನ್ನೂರು ತೊಂಬತ್ತು ದಿನ ॥ ೬ ॥**

**ಗುರು ಪದ್ಮನಾಭರಾಜ್ಞದಲ್ಲಿಂದ ಒಂಬತ್ತು**
**ವರುಷ ಮ್ಯಾಲೈವತ್ತು ಮೂರು ದಿನವು**
**ಧರಣಿಜೆಯ ಮೂಲ ರಾಮನಂಘ್ರಿಯ ಭಜಿಸಿ**
**ಪುರಂದರ ವಿಠಲನ ಪ್ರೀತಿ ಪಡೆದ ॥ ೭ ॥**

ಪಿಂಗಳ ಆಶ್ವೀಜ ಶುದ್ಧ ಸಪ್ತಮಿಯಿಂದ ಮಾಘ ಶುದ್ಧ ನವಮಿಗೆ = ೧೨೨ ದಿನಗಳಾಗುತ್ತವೆ.

ಶ್ರೀಮದಾಚಾರ್ಯರು ಪೂಜಿಸಿದ್ದು ಮೂರು ಮಾಸ ೧೬ ದಿನ = ೧೦೬ ದಿನ. ವ್ಯತ್ಯಾಸ ೧೬ ದಿನಗಳು

ಶ್ರೀನರಹರಿತೀರ್ಥರು ಕೂರ್ಮಾಂನಲ್ಲಿ ಪ್ರತಿಷ್ಠಾಪನೆ ಮಾಡಿ ಉಡುಪಿಗೆ ಪ್ರಯಾಣ ೧೬ ದಿನಗಳಲ್ಲಿ ಕೂಡಿಸುವುದು ಕಷ್ಟಸಾಧ್ಯ .

## ೨. ಅರ್ವಾಚೀನರ ಉಲ್ಲೇಖಗಳು :

೧) **'ಸತ್ಕಥಾ'** :
ಶಾ.ಶ. ೧೧೨೦ = ಕ್ರಿ .ಶ. ೧೧೯೮ ರಂದು ಬದರಿಕಾಶ್ರಮ
ಪ್ರವೇಶ. ಪಿಂಗಳ ಮಾಘ ಶುದ್ಧ ನವಮಿ.
ಅಂದರೆ ಅವತಾರ ಕಾಲ : ೧೧೯೮–೭೯ = ಕ್ರಿ .ಶ. ೧೧೧೯

೨) **ಶ್ರೀರಾಯರ ಮಠದ 'ಗುರುಚರಿತೆ'** : (ಅಧಿಕೃತ ಪುಸ್ತಕ)
ಅವತಾರ:ಶಾ.ಶ. ೧೧೬೦ = ಕ್ರಿ .ಶ. ೧೨೩೮ ವಿಳಂಬಿ ಸಂ.
ಅದೃಶರಾದದ್ದು : ಪಿಂಗಳ ಮಾಘ ಶುದ್ಧ ನವಮೀ.

೩) **ಶ್ರೀವ್ಯಾಸರಾಜ ಮಠದ ಪಂಚಾಂಗ** (೧೯೭೩ – ೭೪)**ದಲ್ಲಿ**

ಬದರೀ ಪ್ರವೇಶ : ಕ್ರಿ.ಶ. ೧೨೭೮ ಮಾಘ ಶುದ್ಧ ನವಮೀ

ಅಂದರೆ ಅವತಾರ ಕಾಲ : ೧೨೭೮ – ೭೯ = ಕ್ರಿ.ಶ. ೧೧೯೯

೪) **ಸೇಲಂ ಸುಬ್ಬಾರಾವ್ :**

ಕ್ರಿ.ಶ. ೧೧೦೭ – ೧೧೮೬

೫) **ಆರ್.ಎಸ್. ಪಂಚಮುಖಿ :**

ಶಾ.ಶ. ೧೧೨೭ – ೧೨೦೫

ಕ್ರಿ.ಶ. ೧೨೦೫–೧೨೯೩

೬) **ಸಿ.ಎನ್. ಕೃಷ್ಣಸ್ವಾಮಿ ಅಯ್ಯರ್ :**

ಅವತಾರ ಕಾಲ – ಶಾ.ಶ. ೧೧೧೯ = ಕ್ರಿ.ಶ. ೧೧೯೭

೭) **ಆರ್.ಎಸ್. ಭಂಡಾರ್‌ಕರ್ :**

ಶಾ.ಶ. ೧೧೧೯ – ೧೧೯೮

ಕ್ರಿ.ಶ. ೧೧೯೭ – ೧೨೭೬

೮) **ರಾಮಚಂದ್ರ ಹಣಮಂತ ದೇಶಪಾಂಡೇ :**

ಶಾ.ಶ.೧೧೧೯–೧೧೭೮

ಕ್ರಿ.ಶ. ೧೧೯೭ – ೧೨೫೬

೯) **ಡಾ॥ ಬುಕ್‌ನನ್. ಎಂ. ರೈಸ್ :**

ಶಾ.ಶ. ೧೧೨೧ –

ಅವತಾರ ಕಾಲ ಕ್ರಿ.ಶ. ೧೨೦೦

೧೦) **ನಾರಾಯಣ ಶ್ರೀನಿವಾಸ ರಾಜಪುರೋಹಿತ :**
ಶಾ.ಶ. ೧೧೨೧ – ೧೧೭೯
ಕ್ರಿ .ಶ. ೧೧೯೯ – ೧೨೫೭

೧೧) **ಕಟ್ಟೆ ಆನಂದತೀರ್ಥಾಚಾರ್ಯ :**
ಶಾ.ಶ. ೧೧೨೭ – ೧೨೨೨
ಕ್ರಿ .ಶ. ೧೨೦೪ – ೧೨೯೯

೧೨) **ಪಿ.ಎಸ್. ಶೇಷಗಿರಿ ಆಚಾರ್ಯ :**
ಕ್ರಿ .ಶ. ೧೨೦೦ – ೧೨೭೦

೧೩) **ಸಿ.ಎಮ್. ಪದ್ಮನಾಭಾಚಾರ್ಯ**
**ಹೆಚ್. ಕೃಷ್ಣಶಾಸ್ತ್ರಿ, ಬಿ.ಎನ್. ಸಾಲೆತೋರಿ.**
**ಸಿ.ಆರ್. ಕೃಷ್ಣರಾವ್, ಬಿ.ಎನ್.ಕೆ. ಶರ್ಮಾ**
**ಬನ್ನಂಜೆ ಗೋವಿಂದಾಚಾರ್ಯ**
**ಮಂಜೇಶ್ವರ ಗೋವಿಂದ ಪೈ**
**ಮಾಧ್ವ ವಾಙ್ಮಯ ತಪಸ್ವಿಗಳೆಂಬ ಪುಸ್ತಕ**
ಕ್ರಿ .ಶ. ೧೨೩೮–೧೩೧೭

೧೪) **ಉಡುಪಿಯ ಕೈಫಿಯತ್ತುಗಳಂತೆ ಅವತಾರ ಕಾಲ :** ಶಾ.ಶ.
೧೧೨೧(ಕ್ರಿ .ಶ. ೧೧೯೯)
ಕಾಳಯುಕ್ತಿ ಸಂ. ಮಾಘ ಶುಕ್ಲ ಸಪ್ತಮಿ
ಬದರಿಕಾಶ್ರಮ ಪ್ರವೇಶ : ಶಾ.ಶ. ೧೨೦೦ (ಕ್ರಿ .ಶ. ೧೨೭೮)
ಈಶ್ವರ ಸಂ. ಮಾಘಶುಕ್ಲ ನವಮೀ

೧೫) **ಡಾ. ಪ್ರಭಂಜನಾಚಾರ್ಯ ವ್ಯಾಸನಕೆರೆ :**
ಕ್ರಿ .ಶ. ೧೨೦೦ – ೧೨೮೦

# ಅವತಾರ ಕಾಲ

ಇದುವರೆಗೆ ಉಪಲಬ್ಧವಿರುವ ಆಧಾರಗಳ ದಾಖಲೆಗಳ ಹಿನ್ನೆಲೆಯಲ್ಲಿ ತಿಳಿದು ಬರುವ ವಿಷಯವೆಂದರೆ ಆಚಾರ್ಯರ (ಅವತಾರ ಕಾಲ) ಕಾಲ ಸುಮೂರು ಕ್ರಿ.ಶ.೧೧೦೭ ರಿಂದ ಕ್ರಿ.ಶ. ೧೨೩೮ ಅಂದರೆ ಸುಮಾರು ೧೩೧ ವರ್ಷಗಳಷ್ಟು ವ್ಯತ್ಯಾಸ ಕಂಡು ಬರುತ್ತಿದೆ. ಇದು ಶಕಾಂಕಗಳಲ್ಲಿಯ ವ್ಯತ್ಯಾಸ.

ಸಂವತ್ಸರಗಳ ಹೆಸರಲ್ಲಿ ವಿಲಂಬಿ, ಆನಂದ, ಪ್ರಮಾಥಿ ಕಾಳಯುಕ್ತಿ, ಸದ್ಧಾರ್ಥಿ ಎಂಬ ವಿಭಿನ್ನ ಉಲ್ಲೇಖಗಳಿವೆ.

ತಿಥಿಗಳಲ್ಲಿ ತೃತೀಯಾ ಸಪ್ತಮೀ ಮತ್ತು ದಶಮೀ ಎಂಬುದಾಗಿವೆ. ವಾರಗಳಲ್ಲಿ ಬುಧವಾರ, ಭಾನುವಾರ, ಸೋಮವಾರಗಳೆಂಬ ಅಭಿಪ್ರಾಯವಿದೆ.

ಅನೇಕ ಆಧಾರಗಳಲ್ಲಿರುವ ಶಕಾಂಕಗಳಿಗೂ ಸಂವತ್ಸರಗಳಿಗೂ ತಿಥಿವಾರಗಳಿಗೂ ಒಂದಕ್ಕೊಂದು ಹೊಂದದಿರುವುದೇ ಹೆಚ್ಚು. ಆಚಾರ್ಯರ ಕಾಲವನ್ನು ಕ್ರಿ.ಶ.೧೨೩೮ ರಿಂದ ಕ್ರಿ.ಶ. ೧೩೧೭ ಎಂದು ಒಪ್ಪುವವರಿಗೆ ಮಾತ್ರ ವಿಲಂಬಿ ಹಾಗೂ ಪಿಂಗಳ ಎಂಬುದು ಕೂಡಿ ಬರುತ್ತವೆ. ಪ್ರಾಯಃ ಇದೇ ಹೀಗೆ ಒಪ್ಪುವವರಿಗೆ ಬಲವೆಂದು ಕಾಣುತ್ತದೆ. ಆದರೆ ಈ ನಿಲುವಿಗೆ ಅನೇಕ ಸಮಕಾಲೀನ ಆಧಾರಗಳನ್ನು ಹೊಂದಿಸಲು ಸಾಧ್ಯವಾಗುವುದಿಲ್ಲ.

## ಅಣುಮಧ್ವ ಚರಿತ :

ವಿಲಂಬಿ ಹಾಗೂ ಪಿಂಗಳವೆಂಮ ಉಲ್ಲೇಖ ಕಾಣುವುದು ಮೊಟ್ಟ ಮೊದಲ ಬಾರಿಗೆ ''ಅಣುಮಧ್ವಚರಿತ'' ಎಂಬ ಪ್ರಾಚೀನ ಗ್ರಂಥದಲ್ಲಿ. ಪ್ರಾಯಃ ಇದನ್ನು ಮೂಲವಾಗಿಟ್ಟುಕೊಂಡು ಆಚಾರ್ಯರ ಕಾಲದ ಅವಧಿಯನ್ನು

೭೯ ಎಂಬುದಾಗಿ ಮುಂದಿನವರು ಹೇಳುತ್ತ ಬಂದದ್ದೆಂದು ತೋರುತ್ತದೆ. ''ಅಣುಮಧ್ವ ಚರಿತ''ದಲ್ಲೂ ''ಏಕೋನಾಶೀತಿ ವರ್ಷಾಣಿ ಭೂತ್ವಾ ಮಾನುಷದೃಷ್ಟಿಗಃ'' ಎಂಬ ವಾಕ್ಯ ಉಂಟು. ಈ ''ಅಣುಮಧ್ವಚರಿತ''ದ ಪ್ರಾಚೀನತೆ ಬಗ್ಗೆ ಭಿನ್ನಾಭಿಪ್ರಾಯಗಳುಂಟು. ಇದು ವಾಯು ಪುರಾಣೋಕ್ತವೆಂದು ಹೇಳಲಾಗುತ್ತಿದೆ. ಪಾಠಾಂತರಗಳುಂಟು. ಇದರಲ್ಲಿರುವ 'ಬುಧವಾರ' ಎಂಬುದು ಸರಿಹೊಂದದಿರುವುದರಿಂದ 'ಸೋಮವಾರ' ಎಂದು ಬದಲಾಯಿಸಬೇಕಾಗುತ್ತದೆ. ಡಾ. ಪ್ರಭಂಜನಾ ಚಾರ್ಯರು ಉಲ್ಲೇಖಿಸುವಂತೆ ಅವರಿಗೆ ದೊರೆತ ಪ್ರತಿಯಲ್ಲಿ ''ವಾಯುಪುರಾಣೇ ಕಲ್ಪಾಂತರ ಕಥಾಪ್ರಸಂಗೇ'' ಎಂದಿರುವುದಾದರೆ ಇದನ್ನು ವಿಚಾರಿಸ ಬೇಕಾಗುತ್ತದೆ. ಈ ಗ್ರಂಥ ಶ್ರೀ ಹೃಷೀಕೇಶ ತೀರ್ಥರಿಂದ ಲಿಖಿತವಾದದ್ದೇ ನಿಜವಾದರೆ, ವಾಯುಪುರಾಣೋಕ್ತವೇ ಆಗಿದ್ದರೆ ತಳ್ಳಿ ಹಾಕುವಂತಿಲ್ಲ.

## ಕೈಫಿಯತ್ತುಗಳು :

ಉಡುಪಿ ಅಷ್ಟ ಮಠದ ಕೈಫಿಯತ್ತುಗಳು ಅರ್ವಾಚೀನ ಉಲ್ಲೇಖ ಗಳೆಂಬುದನ್ನು ಗಮನಿಸಬೇಕು. ಈ ಕೈಫಿಯತ್ತುಗಳಲ್ಲಿ ಅನೇಕ ಅಸಂಗತಿಗಳನ್ನು ಕಾಣಬಹುದಾಗಿದೆ. ಆಚಾರ್ಯರ ಅವತಾರ ಕಾಲ (ಶಾ.ಶ.೧೧೨೧) ಕ್ರಿ.ಶ.೧೧೯೯ ಎಂದು ಉಪನಯನದ ಕಾಲ ಕ್ರಿ.ಶ. ೧೨೦೬ (ಶಾ.ಶ.೧೧೨೮) ಎಂದು ಕೈಫಿಯತ್ತುಗಳಲ್ಲುಂಟು. ಅಂದರೆ ಆಚಾರ್ಯರಿಗೆ ಉಪನಯನವಾದ ಕಾಲದಲ್ಲಿ ಅವರಿಗೆ ೭ ವರ್ಷಗಳು. ಆದರೆ ವಾಯುಪುರಾಣೋಕ್ತ ''ಶ್ರೀಮಧ್ವಾವತಾರ ಮಹಿಮಾ ವರ್ಣನ''ದಲ್ಲಿ ೫ನೇ ವರ್ಷದಲ್ಲಿ ಉಪನಯನವಾದ ಉಲ್ಲೇಖವಿದೆ –

**ಪ್ರಾಪ್ತೇ ಪಂಚಮೇ ವರ್ಷೇ ಬ್ರಾಹ್ಮಣಂ ಕೃತವಾನ್ ಪಿತಾ ॥ ೩೮ ॥**
**ಪಂಚಸಂವತ್ಸರಾದೂರ್ಧ್ವಂ ಚರನ್ನನ್ವೇಷಯನ್ ಗುರುಮ್ ।**

ಈ ಶ್ಲೋಕವು ಅಣುಮಧ್ವಚರಿತದ ಶ್ಲೋಕವಲ್ಲ. ಡಾ. ಪ್ರಭಂಜನಾಚಾರ್ಯರು ಈ ಶ್ಲೋಕವನ್ನು ಅಣುಮಧ್ವಚರಿತದ್ದೆಂದು ತಮ್ಮ ಸುಮಧ್ವ ವಿಜಯ ಕನ್ನಡಾನುವಾದದ ೨೦೦೬ರ ಆವೃತ್ತಿಯ ಪುಟ ೧೦೦ರಲ್ಲಿ ಬರೆದಿರುವುದು ಅರ್ಥವಾಗುತ್ತಿಲ್ಲ.

ವಾಯುಪುರಾಣೋಕ್ತವಾದ ಈ ವಿಷಯ ಕೈಫಿಯತ್ತುಗಳಲ್ಲಿಯ ಉಲ್ಲೇಖಗಳಿಗೆ ಸರಿಹೊಂದುವುದಿಲ್ಲ.

ಅಷ್ಟಮಠಾಧೀಶರಿಗೆಲ್ಲ ಒಂದೇ ದಿನ ಸಂನ್ಯಾಸ ಮತ್ತು ಶ್ರೀ ಪದ್ಮನಾಭ ತೀರ್ಥರಿಗೂ ದೀಕ್ಷೆ ನೀಡಿರುವ ವಿಷಯ ಕೈಫಿಯತ್ತುಗಳಲ್ಲಿ ಉಂಟು. ಇದು ಅತ್ಯಂತ ಅಸಂಗತ.

ಸರ್ಕಾರವು ಅಷ್ಟಮಠಗಳನ್ನು ಸರ್ಕಾರೀ ದಾಖಲೆಗೋಸ್ಕರ ಮಾಹಿತಿ ಯನ್ನು ಕೊಡಬೇಕೆಂದು ಇಲ್ಲದಿದ್ದರೆ ಸರ್ಕಾರೀ ದಾಖಲೆಗಳಲ್ಲಿ ಅಷ್ಟಮಠ ಗಳಲ್ಲಿ ಏನೂ ಉಳಿಯದೆಂದು ಒತ್ತಾಯ ಬಂದಾಗ ಅವಸರದಲ್ಲಿ ತಮಗೆ ತಿಳಿದ ವಿಷಯವನ್ನು ಅಂದಿನ ಎಲ್ಲ ಪೀಠಾಧಿಪತಿಗಳು ಸೇರಿ ಬರೆದು ಕೊಟ್ಟದ್ದೆಂಬುದನ್ನು ಗಮನಿಸಬೇಕು. ನಿರಂತರ ಪೂಜೆ, ಪಾಠ-ಪ್ರವಚನಗಳಲ್ಲಿ ನಿರತರಾದ ಹೆಚ್ಚು ಲೌಕಿಕ ಪರಿಚಯವಿಲ್ಲದ ಪೀಠಾಧಿಪತಿಗಳು ಸೇರಿ ಬರೆದು ಕೊಟ್ಟದ್ದರಿಂದಲೇ ಅನೇಕ ಅಸಂಗತಿಗಳು ಸೇರಿಕೊಳ್ಳಲು ಸಾಧ್ಯವಾಗಿರ ಬಹುದು. ಇದರಿಂದ ಕೈಫಿಯತ್ತುಗಳು ನಿರ್ದುಷ್ಟ ಆಧಾರವಾಗಲಾರವು.

**ಡಾ. ಪ್ರಭಂಜನಾಚಾರ್ಯರ ಕಾಲನಿರ್ಣಯ ಪುಸ್ತಕ :**

ಕೈಫಿಯತ್ತುಗಳ ಮೇಲೆ ಭಾರ ಹಾಕಿರುವ ಡಾ. ಪ್ರಭಂಜನಾಚಾರ್ಯರು ತಮ್ಮ ಕಾಲನಿರ್ಣಯ ಪುಸ್ತಕದಲ್ಲಿ ಅವರೇ ಬರೆದಿರುವ ವಾಕ್ಯಗಳು ಹೀಗಿವೆ-

೧) ಪುಟ ೧೮ ರ ಅಡಿಟಿಪ್ಪಣಿ :

ಉಡುಪಿಯ ಅಷ್ಟಮಠಾಧೀಶರಿಗೆಲ್ಲ ಒಂದೇ ದಿವಸ ಸನ್ಯಾಸದೀಕ್ಷೆ ನೀಡಿದಂತೆ ಉಕ್ತವಾಗಿದೆ. (ಕೈಫಿಯತ್ತುಗಳಲ್ಲಿ). ಅದು ಸರಿಯಲ್ಲ ಎಂಬುದು ಸ್ಪಷ್ಟ.

೨. ಪುಟ ೩೮ರಲ್ಲಿ ಕೈಫಿಯತ್ತುಗಳಲ್ಲಿ ಕೆಲವು ವಿಷಯಗಳು ಅಸತ್ಯವಿರಬಹುದು, ಶುದ್ಧ ಕಲ್ಪನೆಯೂ ಆಗಿರಬಹುದು. (ಎಂದ ಮಾತ್ರಕ್ಕೆ ಅವುಗಳನ್ನೆಲ್ಲ ಸಾರಾಸಗಟಾಗಿ ನಿರಾಕರಿಸುವುದು ಸಂಶೋಧನ ದೃಷ್ಟಿ ಎನ್ನಿಸಲಾರದು)

೩. ಪುಟ. ೩೯ರಲ್ಲಿ : ಅಷ್ಟಮಠದ ಯತಿಗಳಿಗೂ ಶ್ರೀಶೋಭನ ಭಟ್ಟರಿಗೂ ಒಂದೇ ದಿನ ಆಶ್ರಮವಾದಂತೆ ಉಲ್ಲೇಖ ಕಂಡು ಬರುವುದು ನಿಜ. ಇದು ಅಸಂಗತವೆಂಬುದೂ ನಿಜ. ಇಂತಹ ತಪ್ಪುಗಳು ಅನೇಕ ಅಧಿಕೃತ ಶಾಸನಗಳಲ್ಲೂ ಸಹ ಕಂಡು ಬರುವುದು ವಿರಳವೇನಲ್ಲ.

ಈ ಹೇಳಿಕೆಗಳಿಂದ ಕೈಫಿಯತ್ತುಗಳನ್ನು ಪೂರ್ಣ ನಂಬಲಾಗದು. ಆದರೆ ತಮಗೆ ಸರಿಹೊಂದುವ (ಆಚಾರ್ಯರ ಅವತಾರ ೪೩೦೦ ಅಥವಾ ಕ್ರಿ.ಶ. ೧೨೦೦) ಕಾಲಕ್ಕೆ ಪೋಷಕವಾಗಿರುವ ಅಂಶಗಳು ಮಾತ್ರ ಆಧಾರ. ಉಳಿದವು ನಿರಾಧಾರ ಎಂಬ ಅವರ ನಿಲುವು ಸರಿ ಎಂದು ತೋರುವುದಿಲ್ಲ.

ಅದರಂತೆ ಪುಟ ೪೦ರಲ್ಲಿ ''ಕೈಫಿಯತ್ತುಗಳಲ್ಲಿ ಬಂದಿರುವ ಕಾಲ ಸ್ವತಃ ಶ್ರೀಮದಾಚಾರ್ಯರ ವಾಕ್ಯವನ್ನೇ ಆಧರಿಸಿದೆ ಎಂಬುದನ್ನೂ ಗಮನಿಸಬೇಕು'' ಎಂದಿದ್ದಾರೆ. ಅವರೇ ಪುಟ.೧೬ರಲ್ಲಿ ಆಚಾರ್ಯರ ಪ್ರಕಾರ ೪೩೦೦ರ ನಂತರ ಅಂದರೆ ೪೩೦೧. ಇದು ಸರಿಯಾಗಿ ಶಾ.ಶ. ೧೧೨೨ ರೌದ್ರಿ, ಸಂ. ಎಂದಾಗುತ್ತದೆ. ಕೆಲವು ಪ್ರಾಚೀನ ದಾಖಲೆಗಳಲ್ಲಿ ಅವರ ಅವತಾರ ರೌದ್ರಿ, ಸಂ. ಎಂಬುದಾಗಿ ಉಲ್ಲೇಖಿಸಲ್ಪಟ್ಟಿರುವುದು ಇದಕ್ಕೆ ಸಂವಾದಿಯಾಗಿದೆ'' ಎಂದು ಬರೆದಿದ್ದಾರೆ.

ಒಂದು ವೇಳೆ ಡಾ. ಪ್ರಭಂಜನಾಚಾರ್ಯರ ಪ್ರಕಾರ ಆಚಾರ್ಯರ ಅವತಾರ ಕ್ರಿ.ಶ.೧೨೦೦ ರೌದ್ರಿ ಸಂ. ಮತ್ತು ಆಚಾರ್ಯರ ಬದರಿಕಾಶ್ರಮದ ಪ್ರವೇಶ ಕ್ರಿ.ಶ.೧೨೮೦ ಪ್ರಮಾಥಿ ಎಂದಾಗುವುದಾದರೆ, ಕೈಫಿಯತ್ತುಗಳಲ್ಲಿ ಅವತಾರ - ಕ್ರಿ.ಶ. ೧೧೯೮ ಕಾಳಯುಕ್ತಿ ಮತ್ತು ಬದರಿಕಾಶ್ರಮ ಗಮನ ಕ್ರಿ.ಶ. ೧೨೭೮ ಈಶ್ವರ ಸಂವತ್ಸರ ಎಂದಿರುವುದರಿಂದ ಕೈಫಿಯತ್ತುಗಳಿಗಿಂತ ಭಿನ್ನ ನಿಲುವನ್ನು ಅವರು ಹೊಂದಿರುವರೆಂದು ತಿಳಿದು ಬರುತ್ತದೆ.

ಡಾ. ಪ್ರಭಂಜನಾಚಾರ್ಯರ ಹಾಗೂ ಪಂ. ಪಿ.ಎಸ್. ಶೇಷಗಿರಿ ಆಚಾರ್ಯರ (ಅವತಾರದ ಕಾಲವನ್ನು ಕ್ರಿ.ಶ. ೧೨೦೦ ಎಂಬ) ನಿಲುವಿಗೆ ಸಮಕಾಲೀನ ಅನೇಕ ಶಾಸನಗಳನ್ನು ಹೊಂದಿಸಲು ಬರುವುದೇ ತಳಹದಿಯಾಗಿದೆ ಎಂದು ತಿಳಿಯುವುದಾದರೆ, ಶ್ರೀನರಹರಿತೀರ್ಥರ ಕೊನೆಯ ಶಾಸನವಾದ ಕ್ರಿ.೧೨೯೪ರ ಶಾಸನವನ್ನು ಕೂಡಿಸುವುದು ಸಾಧ್ಯವಿಲ್ಲ. ಇದಕ್ಕೆ ಅವರು ಕೊಡುವ ಸಮಾಧಾನವೆಂದರೆ, ''ಶ್ರೀಮದಾಚಾರ್ಯರು ಬದರಿಕಾಶ್ರಮ ಪ್ರವೇಶ ಮಾಡಿದ ನಂತರವೂ ಶ್ರೀ ನರಹರಿತೀರ್ಥರು ಕಳಿಂಗ ದೇಶವನ್ನು ಆಳುತ್ತಿದ್ದರು'' ಎಂದು. ಇದು ಸಂಪ್ರದಾಯಕ್ಕೂ ಅನೇಕ ಆಧಾರಗಳಿಗೂ ಸರಿ ಹೊಂದುವುದಿಲ್ಲ. ಅಲ್ಲದೆ ಸಂಗತವೂ ಆಗುವುದಿಲ್ಲ. ಕೈಫಿಯತ್ತಿನ ಉಲ್ಲೇಖವೂ ಇದಕ್ಕೆ ಸಂಗತ ವಾಗುವುದಿಲ್ಲ ಎಂಬುದು ಗಮನಾರ್ಹ.

ಡಾ. ಪ್ರಭಂಜನಾಚಾರ್ಯರು ಪುಟ ೩೮ರಲ್ಲಿ, ''ಪೂರಕವಾಗಿ ೧೧ ಆಧಾರಗಳನ್ನು ನೀಡಿರುವೆನು. ಅವುಗಳಲ್ಲಿ ಉಡುಪಿಯ ಅಷ್ಟ ಮಠದ ಕೈಫಿಯತ್ತುಗಳು ಒಂದು ಆಧಾರ ಮಾತ್ರ. ಕೇವಲ ಕೈಫಿಯತ್ತುಗಳನ್ನೇ ಆಧರಿಸಿ ವಾದವನ್ನು ಮಂಡಿಸಿಲ್ಲ'' ಎಂದು ಬರೆದಿದ್ದಾರೆ. ಆದರೆ ಅವುಗಳಲ್ಲಿ ಕೆಲವು, ಕೈಫಿಯತ್ತುಗಳನ್ನೇ ಆಧಾರವಾಗಿಟ್ಟುಕೊಂಡು ಹೊರಟಿವೆ ಎಂಬುದು ಅವರ ವಾಕ್ಯಗಳಿಂದಲೇ ಸ್ಪಷ್ಟ.

ಅದರಂತೆ ಪುಟ ೩೧ರಲ್ಲಿ ಕಣ್ವತೀರ್ಥದಲ್ಲಿ ಶ್ರೀಮದಾಚಾರ್ಯರು ಸೂರ್ಯಗ್ರಹಣನಿಮಿತ್ತ ಮಿಂದು ಸಮುದ್ರಸ್ನಾನಕ್ಕೆ ತೆರಳಿದ್ದನ್ನು ಪ್ರಸ್ತಾಪಿಸಿ ದ್ದಾರೆ. ಈ ಪ್ರಸಂಗವು ನಡೆದದ್ದು ಆಚಾರ್ಯರು ಬದರಿಗೆ ತೆರಳುವ ಮುನ್ನದ ಕೆಲ ದಿನಗಳ ಪ್ರಸಂಗವೆಂದು ತಿಳಿಸುತ್ತಾರೆ ಪ್ರಭಂಜನಾ ಚಾರ್ಯರು. ಇದಕ್ಕೆ ಅವರು ಕೊಡುವ ಕಾರಣ ಈ ವಿಷಯ ಹದಿನಾರನೆಯ ಸರ್ಗದಲ್ಲಿ ಬಂದಿರುವುದು. ಆದರೆ ಹದಿನಾರನೆಯ ಸರ್ಗದಲ್ಲಿ ಆಚಾರ್ಯರು ತೋರಿರುವ ಅಸಾಧಾರಣ ಮಹಿಮೆಗಳ ಸಂಗ್ರಹ ಮಾತ್ರ ಇದೆ. ಆ ಎಲ್ಲ ಘಟನೆಗಳು ಭಿನ್ನ ಭಿನ್ನ ಕಾಲದಲ್ಲಿ ನಡೆದದ್ದು. ಆಚಾರ್ಯರ ಬದರೀ ಗಮನದ ಕೆಲವು ದಿನಗಳ ಮುನ್ನದ ಪ್ರಸಂಗಗಳಾಗಲೇ ಬೇಕಿಲ್ಲ.

ಪುಟ ೩೨ ರಲ್ಲಿ ''ಕೈಫಿಯತ್ತುಗಳಲ್ಲಿ ಉಲ್ಲೇಖಿಸಿರುವ ಶ್ರೀಕೃಷ್ಣ ಪ್ರತಿಷ್ಠೆ (ಶಾ.ಶ. ೧೧೬೦ ಕ್ರಿ.ಶ. ೧೨೩೮ ಹೇವಿಳಂಬಿ ಸಂ. ಮಾಘಶುಕ್ಲ ತೃತೀಯಾ ಬುಧವಾರ ಜನವರಿ ೨೦), ಶ್ರೀಪದ್ಮನಾಭತೀರ್ಥರಿಗೆ ಸನ್ಯಾಸ ಕೊಟ್ಟ ದಿವಸ ಶಾ.ಶ. ೧೧೮೦= ಕ್ರಿ.ಶ. ೧೨೫೮ ಪಿಂಗಳ ವೈಶಾಖ ಶು. ಸಪ್ತಮೀ ವಿವರಗಳು ಸಂಗತವಾಗುತ್ತವೆ.'' ಎಂದು ಬರೆದಿದ್ದಾರೆ. ಆದರೆ, ಶ್ರೀ ಪದ್ಮನಾಭತೀರ್ಥರಿಗೆ ಸನ್ಯಾಸ ದೀಕ್ಷೆ ಕೊಟ್ಟ ದಿವಸ ಯಾವುದೆಂದು ನಿರ್ಧರಿಸುವುದು ಹೇಗೆ ? ಗುರುಚರಿತೆ ಎಂಬ ಶ್ರೀರಾಯರ ಮಠದ ಅಧಿಕೃತ ಪುಸ್ತಕದ ಪುಟ ೮೩ ರಲ್ಲಿ ಶ್ರೀಪದ್ಮನಾಭತೀರ್ಥರಿಗೆ ಆಶ್ರಮವಾದದ್ದು ಕ್ರಿ.ಶ. ೨೬೩ ಎಂದಿದೆ. ಶ್ರೀ ಪ್ರಭಂಜನಾಚಾರ್ಯರೇ ಪುಟ ೩೮ರಲ್ಲಿ ಶ್ರೀ ಪದ್ಮನಾಭತೀರ್ಥರು ಹಾಗೂ ಶ್ರೀ ನರಹರಿ ತೀರ್ಥರ ಕಾಲದ ವಿಚಾರ, ಅವರ ನಿರ್ಯಾಣ ಕಾಲವನ್ನೂ ಅಥವಾ ಪೀಠದ ಆಳ್ವಿಕೆಯ ಕಾಲವನ್ನು ಖಚಿತವಾಗಿ ತಿಳಿಸುವ ಯಾವ ಸಮಕಾಲೀನ ದಾಖಲೆಗಳು ಉಪಲಬ್ಧವಿಲ್ಲ'' ಎಂದು ತಿಳಿಸಿದ್ದಾರೆ. ಹೀಗಿರುವಾಗ ಕೈಫಿಯತ್ತಿನ ಉಲ್ಲೇಖಗಳು ಶ್ರೀ ಪದ್ಮನಾಭ ತೀರ್ಥರಿಗೆ ಸಂನ್ಯಾಸ ಕೊಟ್ಟ ದಿವಸಕ್ಕೆ ಸಂಗತವಾಗುತ್ತದೆ ಎಂದು ಉಲ್ಲೇಖಿಸಿದ್ದು ಹೇಗೆ ?

ಇನ್ನು, ಪುಟ ೩೩ರಲ್ಲಿ "ಶ್ರೀಮದಾಚಾರ್ಯರ ಕಾಲ ಕ್ರಿ.ಶ.೧೨೦೦ – ೧೨೮೦ ಎಂಬ ನಿರ್ಣಯಕ್ಕೆ ಈ ನಾಲ್ವರ (ಶ್ರೀ ಪದ್ಮನಾಭಾದಿಗಳ) ಕಾಲ ಮಾನಗಳು ಸಹ ಹೊಂದುತ್ತವೆ. ಎಂಬುದನ್ನು ಗಮನಿಸಬಹುದು" ಎಂದಿದ್ದಾರೆ. ಆದರೆ ಅವರೇ ಇದರ ಮೇಲೆ ಇರುವ ಪ್ಯಾರಾದಲ್ಲಿ ಶ್ರೀಪದ್ಮನಾಭತೀರ್ಥಾದಿ ನಾಲ್ವರ ಕಾಲಮಾನಗಳನ್ನು ಉದಾಹರಿಸಿದ್ದಾರೆ. ಅದರಲ್ಲಿ ಶ್ರೀ ಪದ್ಮನಾಭತೀರ್ಥರ ಕಾಲ ಕ್ರಿ.ಶ. ೧೩೧೭–೨೪ ಎಂದಿದೆ. ಅಂದರೆ ಕ್ರಿ.ಶ. ೧೩೧೭ ಶ್ರೀ ಪದ್ಮನಾಭ ತೀರ್ಥರ ಪೀಠಾಳ್ವಿಕೆ ಆರಂಭ ಎಂದಾಯಿತು. ಶ್ರೀ ಪ್ರಭಂಜನಾಚಾರ್ಯರ ಪ್ರಕಾರ ಶ್ರೀಮದಾಚಾರ್ಯರು ಬದರಿಕಾಶ್ರಮಕ್ಕೆ ತೆರಳಿದ್ದು ಕ್ರಿ.ಶ. ೧೨೮೦ರಲ್ಲಿ ಹಾಗಾದರೆ, ಕ್ರಿ.ಶ. ೧೨೮೦ ರಿಂದ ಕ್ರಿ.ಶ. ೧೩೧೭ರವರೆಗೆ ಸುಮಾರು ೩೭ ವರ್ಷಗಳವರೆಗೆ ಪೀಠದಲ್ಲಿ ಯಾರಿದ್ದರು? ಇದಕ್ಕೆ ಕ್ರಿ.ಶ. ೧೨೮೦ರಿಂದಲೇ ಶ್ರೀ ಪದ್ಮನಾಭತೀರ್ಥರ ಆಳ್ವಿಕೆ ಆರಂಭ ಎನ್ನಬೇಕಾಗುತ್ತದೆ.

ಶ್ರೀಕೃಷ್ಣಪ್ರತಿಷ್ಠೆಗೆ ಮುಂಚೆ ಬದರಿಯಿಂದ ವಾಪಸ್ಸು ಶ್ರೀಮದಾಚಾರ್ಯರು ಬರುವಾಗ ಗೋದಾವರೀ ತೀರದಲ್ಲಿ ದಿಗ್ಗಜಗಳ ಸಭೆಯಲ್ಲಿ ಶ್ರೀಶೋಭನಭಟ್ಟರ ಭೇಟಿ ಎಂಬುದು ಶ್ರೀ ಸುಮಧ್ವವಿಜಯ ದಿಂದ ತಿಳಿದು ಬರುವ ಸಂಗತಿ. ಕೈಫಿಯತ್ತಿನ ಪ್ರಕಾರ ಶ್ರೀಕೃಷ್ಣ ಪ್ರತಿಷ್ಠೆ ಆದದ್ದು ಕ್ರಿ.ಶ. ೧೨೩೮(ಶಾ.ಶ.೧೧೬೦). ಶ್ರೀ ಪದ್ಮನಾಭತೀರ್ಥರ ನಿರ್ಯಾಣ ಕಾಲ. ಕ್ರಿ.ಶ. ೧೩೨೪ ಎಂದು ಸ್ವೀಕರಿಸಿದರೆ ಮೊದಲ ಬಾರಿಗೆ ಶ್ರೀಮದಾಚಾರ್ಯರನ್ನು ಶ್ರೀಶೋಭನಭಟ್ಟರು ಭೇಟಿ ಆದಾಗ ಅವರು ಇನ್ನೂ ೧೪ ವರ್ಷದ ಕೆಳಗಿನ ವಯಸ್ಸಿನವರಾಗಬೇಕಾಗುತ್ತದೆ. ಆದರೆ, ಶ್ರೀಮಧ್ವವಿಜಯವೇ ತಿಳಿಸುವಂತೆ ಶ್ರೀಶೋಭನಭಟ್ಟರು ಶ್ರೀಮದಾ ಚಾರ್ಯರನ್ನು ಮೊದಲ ಬಾರಿಗೆ ಭೇಟಿಯಾಗುವಾಗಲೇ ಪ್ರಚಂಡ ಪಾಂಡಿತ್ಯ ಪಡೆದವರಾಗಿದ್ದಲ್ಲದೆ ಆ ಸಭೆಯಲ್ಲೇ ವರಿಷ್ಠರಾಗಿದ್ದು, "ವರ್ತಮಾನ ಸಮಯಾನ್ನಿರಾಕರೋತ್" ಆ ಕಾಲದ ಎಲ್ಲ ಮತಗಳನ್ನು ನಿರಾಕರಿಸಿದ್ದರು.

೧೪ ವರ್ಷದ ಕೆಳಗಿನ ಹದಿಹರಯ ವಯಸ್ಸಿನಲ್ಲಿ ಎಲ್ಲ ಮತಗಳನ್ನು ನಿರಾಕರಿಸಿ ಎಲ್ಲ ವಿದ್ವಾಂಸರಿಂದ ವರಿಷ್ಠ ಸಮ್ಮತರಾಗಿದ್ದರೆಂದು ಊಹಿಸ ಬೇಕಾಗುತ್ತದೆ. ಇದನ್ನು ಕೂಡಿಸುವುದು ಕಷ್ಟಸಾಧ್ಯ . ಕೂಡಿಸಿದರೂ ಅವರ ಆಯುಷ್ಯ ನೂರು ವರ್ಷ ದಾಟಿ ಹೋಗುವುದಂತೂ ನಿಶ್ಚಿತ. ಈ ಎಲ್ಲ ಊಹೆಗಳ ಅಡಿಯಲ್ಲಿ ಕೈಫಿಯತ್ತಿನ ಉಲ್ಲೇಖಗಳು ಶ್ರೀ ಪದ್ಮನಾಭತೀರ್ಥರ ಕಾಲ ಮಾನಕ್ಕೆ ಹೊಂದಿಕೊಳ್ಳುತ್ತದೆ ಎಂಬ ಮಾತು ಹೇಗೆ ಸಂಗತವಾಗುತ್ತದೆ? ಶ್ರೀ ಶೋಭನಭಟ್ಟರ ಭೇಟಿ ಶ್ರೀಮದಾಚಾರ್ಯರ ಜೊತೆ ಕ್ರಿ.ಶ. ೧೨೩೮ರ (ಶ್ರೀಕೃಷ್ಣ ಪ್ರತಿಷ್ಠೆಗೆ ಮುಂಚೆ) ಮುಂಚೆ. ಸಂನ್ಯಾಸ ದೀಕ್ಷೆ ಪಡೆದದ್ದು ಕ್ರಿ.ಶ.೧೨೫೮ ಅಥವಾ ಕ್ರಿ.ಶ. ೧೨೬೩. ಅಂದರೆ ಸುಮಾರು ೨೦ ರಿಂದ ೨೫ ವರ್ಷಗಳ ಕಾಲ ಶ್ರೀ ಶೋಭನಭಟ್ಟರಿಗೆ ಸನ್ಯಾಸ ದೀಕ್ಷೆ ಆಗಿರಲಿಲ್ಲ ಎಂದು ಊಹಿಸಬೇಕಾಗುತ್ತದೆ. ಇದೂ ಅಷ್ಟು ಸಂಗತವಾಗುವುದಿಲ್ಲ.

ಕೈಫಿಯತ್ತುಗಳ ಉಲ್ಲೇಖದಂತೆ ಶ್ರೀಮದಾಚಾರ್ಯರ ಅವತಾರ ಮಾಘ ಶುಕ್ಲಸಪ್ತಮಿ. ಇದು ಇದುವರೆಗೆ ದೊರೆತಿರುವ ಹಾಗೂ ಆಚರಣೆಯಲ್ಲಿರುವ ಆಶ್ವೀನ ಶುಕ್ಲ ದಶಮೀ ಶ್ರೀಮಧ್ವಜಯಂತಿ ಎಂಬುದಕ್ಕೂ ವಿರೋಧ ಬರುತ್ತದೆ. ಯಾರೂ ಮಾಘ ಶುಕ್ಲ ಸಪ್ತಮೀ ಮಧ್ವಜಯಂತೀಯನ್ನು ಆಚರಿಸುತ್ತ ಬಂದದ್ದಿಲ್ಲ.

ವಿದ್ವಾಂಸರಾದ ಬನ್ನಂಜೆ ಗೋವಿಂದಾಚಾರ್ಯರು ಉದಾಹರಿಸಿರುವ ತಿಥಿನಿರ್ಣಯದ ವಾಕ್ಯ ಎಲ್ಲಿಯವರೆಗೆ ಆ ಗ್ರಂಥ ಶ್ರೀಮದಾಚಾರ್ಯರ-ದ್ದೆಂದು ನಿರ್ಣಯವಾಗುವುದಿಲ್ಲ, ಅಲ್ಲಿಯವರೆಗೆ ಸ್ವೀಕರಿಸಲು ಯೋಗ್ಯ ವೆನಿಸುವುದಿಲ್ಲ. ಡಾ|| ಪ್ರಭಂಜನಾಚಾರ್ಯರು ಆಕ್ಷೇಪಿಸಿರುವ ಅಂಶಗಳಿಗೆ ಅವರು ಉತ್ತರಿಸಬೇಕಾಗಿರುವ ಕಾರಣ ಅವರ ಬಗ್ಗೆ ಹೆಚ್ಚು ವಿಮರ್ಶೆ ಮಾಡಲಾಗದು. (ವೇದಗಳ ಹಾಗೂ ಶ್ರೀಮದಾಚಾರ್ಯರ ವಾಕ್ಯಗಳ ಮೇಲೆ ಅವರಿಗಿರುವ ದೀಕ್ಷೆಯ ಹಿನ್ನೆಲೆಯಲ್ಲಿ ನನ್ನ ಅಭಿಪ್ರಾಯವನ್ನು ಪುಷ್ಟೀಕರಿಸುವರೆಂದು ತಿಳಿದಿದ್ದೇನೆ).

ಶ್ರೀಮದಾಚಾರ್ಯರ ಕಾಲನಿರ್ಣಯದ ಬಗ್ಗೆ ಪರಮಪೂಜ್ಯ ಶ್ರೀಪೇಜಾವರ ಶ್ರೀಪಾದಂಗಳವರಾಗಲಿ ಪ್ರೊ. ಕೆ.ಟಿ. ಪಾಂಡುರಂಗಿ ಯವರಾಗಲಿ ಆ ಆ ಸಂದರ್ಭಕ್ಕೆ ಅನುಗುಣವಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಅವರನ್ನು ವಿಚಾರಿಸಿದಾಗ ನಿರ್ಣಯವಾಗಿಲ್ಲ ಎಂಬ ಉತ್ತರವನ್ನು ಕೊಟ್ಟಿದ್ದಾರೆ.

ಇದುವರೆಗಿನ ವಿಶ್ಲೇಷಣೆಯಿಂದ ಸಂಕ್ಷಿಪ್ತವಾಗಿ ಯಾರು ಯಾವ ಅಭಿಪ್ರಾಯಗಳನ್ನು ಹೇಗೆ ಮಂಡಿಸಲು ಪ್ರಯತ್ನಿಸಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ನನ್ನ ಅಧ್ಯಯನದ ಪರಿಮಿತಿಯಲ್ಲಿ ಇದುವರೆಗಿನ ನಿಲುವುಗಳಲ್ಲಿ ಹೆಚ್ಚು ಸೂಕ್ತವಾದ ವಿಚಾರ ಯಾವುದೆಂಬುದನ್ನು ಮಂಡಿಸಲು ಪ್ರಯತ್ನಿಸುತ್ತೇನೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ನಿರ್ಣಯಾಚಾರ್ಯ ರೆಂದು ಪ್ರಸಿದ್ಧಿ. ಈ ಪ್ರಶಸ್ತಿ ಮತ್ತೊಬ್ಬರಿಗೆ ಇಲ್ಲ. ಶ್ರೀಮದಾಚಾರ್ಯರ ಮ.ಭಾ.ತಾ.ನಿ.ಯದ ಪ್ರಕಾರ ಕಲಿಯುಗದ ೪೩೦೦ ವರ್ಷ ಕಳೆದ ನಂತರವೇ ಶ್ರೀಮಧ್ವಾಚಾರ್ಯರ ಅವತಾರ. ಇದರಲ್ಲಿ ಎರಡು ಮಾತಿಲ್ಲ. ಇದು ನಿರ್ಣಯ. ಈ ಕಾಲಕ್ಕಿಂತ ಹಿಂದೆ ಹೋಗಲು ಸಾಧ್ಯವಿಲ್ಲ ಎಂಬುದು ದಿಟ. ''ಚತುಃ ಸಹಸ್ರೇ ತ್ರಿಶತೋತ್ತರೇ ಗತೇ'' ಎಂಬ ಆಚಾರ್ಯರ ವಾಕ್ಯದಲ್ಲಿ ''ಗತೇ''ಶಬ್ದ ವಿರುವುದರಿಂದ ೪೩೦೦ ವರ್ಷ ಕಳೆದ ನಂತರ ಎಂಬ ಅರ್ಥ ಹೊರಡುತ್ತದೆ. ಹೀಗಾಗಿ ೪೩೦೦ರ ನಂತರದ ವರ್ಷಗಳು ಎಷ್ಟು ಎಂಬುದರಲ್ಲೇ ವಿವಾದ.

೧. ಮ.ಭಾ.ತಾ.ನಿ.ದಲ್ಲಿ ''ಚತುಃಸಹಸ್ರಂ ತ್ರಿಶತೋತ್ತರಂ'' ಎಂಬ ವಾಕ್ಯ ಎರಡು ಬಾರಿ ಬಂದಿದೆ.

ಭೀಮಸೇನದೇವರು ಮತ್ತೆ ಯಾವಾಗ ಬ್ರಾಹ್ಮಣರಾಗಿ (ಮಧ್ವರಾಯ ರಾಗಿ) ಅವತರಿಸಿ ದೈತ್ಯರಿಂದ ಮರೆಮಾಡಲ್ಪಟ್ಟ ಹರಿತತ್ವವನ್ನು ಉಪದೇಶಿಸು ತ್ತಾರೆ ಎಂದು ಹೇಳುವ ಪ್ರಸಂಗದಲ್ಲಿ ಒಮ್ಮೆ ಬಂದಿದೆ. ಅದು ಹೀಗಿದೆ –

चतुःसहस्रे त्रिशतोत्तरे गते
संवत्सराणां तु कलौ पृथिव्याम् ।
जातः पुनर्विप्रतनुः स भीमो
दैत्यैर्निगूढं हरितत्वमाह ।। १३१ ।।

ಇನ್ನೊಮ್ಮೆ ಇದಕ್ಕಿಂತ ಮುಂಚಿನ ಮೂರನೇ ಶ್ಲೋಕ. ಅಲ್ಲಿ ದ್ವಾಪರದಲ್ಲಿ (ಭೀಮಸೇನ ದೇವರಿಂದ ಸಂಹರಿಸಲ್ಪಟ್ಟ) ಅಸುನೀಗಿದ ಅಸುರರು ವೀರ ಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಅನುಭವಿಸಿ ನಂತರ ಭೂಮಿಯಲ್ಲಿ ಹುಟ್ಟಿ ನಾನೇ ಈಶ್ವರ ಜಗತ್ತು ಸುಳ್ಳು ಎಂಬ ಉಪಾಸನೆಯಿಂದ ತಮಸ್ಸನ್ನು ಹೊಂದಿದರೆಂದು ಹೇಳುವ ಪ್ರಸಂಗ. ಅದು ಹೀಗಿದೆ -

चतुःसहस्रं त्रिशतोत्तरं ते
संवत्सराणामनुभूयदिव्यान् ।
भोगान् नरत्वेऽपि सदेश्वरोऽह
मसज्जगच्छेति धियाऽऽप्नुवंस्तमः ।। १२८ ।।

ಇಲ್ಲಿ, ಅಸುರರು ಹುಟ್ಟುವುದು ಶ್ರೀಮದಾಚಾರ್ಯರು ಅವತರಿಸುವುದು ಎರಡೂ ೪೩೦೦ ವರ್ಷದಲ್ಲಾಗಲು ಸಾಧ್ಯವಿಲ್ಲ. ಅಸುರರು ಹುಟ್ಟಿಅಪಪ್ರಚಾರ ಮಾಡಿ ಹರಿತತ್ವವನ್ನು ಮರೆಮಾಡಲ್ಪಟ್ಟ ಮೇಲೆ ಶ್ರೀಮದಾಚಾರ್ಯರ ಅವತಾರ ಎನ್ನಬೇಕಷ್ಟೆ?! ಹಾಗಾದರೆ ಸರಿಯಾಗಿ ೪೩೦೦ಕ್ಕೆ ಆಚಾರ್ಯರ ಅವತಾರ ಎನ್ನಲಾಗದು. ಹೀಗಾಗಿ ಶ್ಲೋ.೧೨೮ಕ್ಕೆ ಮಹಾಭಾರತದ ಯುದ್ಧದಲ್ಲಿ ಅಥವಾ ಮರಣ ಹೊಂದಿದ ಅಸುರರು ೪೩೦೦ ವರ್ಷ ವೀರಸ್ವರ್ಗದಲ್ಲಿ ದಿವ್ಯಭೋಗಗಳನ್ನು ಅನುಭವಿಸಿ ಮತ್ತೆ ಭೂಮಿಯಲ್ಲಿ ಹುಟ್ಟಿ ಆಗಲೇ ಪ್ರಚಾರದಲ್ಲಿದ್ದ ಪ್ರಸಿದ್ಧಿ ಪಡೆದಿದ್ದ ಮಾಯಾಮತದ ತತ್ವಗಳಾದ ನಾನೇ ಈಶ್ವರ ಜಗತ್ತು ಸುಳ್ಳು ಎಂಬ ಉಪಾಸನೆ ಮಾಡಿ ತಮಸ್ಸನ್ನು ಸಂಪಾದಿಸಿಕೊಂಡರು. (ಕೊಳ್ಳುವರು) ಎಂದರ್ಥ

ಮಾಡಬೇಕು. ಹೀಗೆ ಅರ್ಥಮಾಡಿದರೂ ಮಣಿಮಂತ ಮೊದಲಾದವರು ಮಹಾಭಾರತದಲ್ಲಿ ಶ್ರೀಕೃಷ್ಣನಿಂದ ಹತರಾಗಿದ್ದಾರೆ. ಈ ಮಣಿಮಂತನೇ ಸಂಕರನಾಗಿ ಹುಟ್ಟಿದ್ದಾನೆಂದು ಶ್ರೀಮಧ್ವವಿಜಯದಲ್ಲುಂಟು. ಇದರಂತೆ ಇನ್ನನೇಕರು. ಇವುಗಳನ್ನು ಕೂಡಿಸುವುದು ಕಷ್ಟ. ಶ್ರೀಮದಾಚಾರ್ಯರು ಹೆಚ್ಚು ಶಬ್ದಗಳನ್ನು ಬಳಸುವವರಲ್ಲ. ಆದರೂ ಮೇಲಿನ ವಾಕ್ಯವನ್ನು ಎರಡು ಬಾರಿ ಆಡಿದ್ದರಲ್ಲಿ ಏನೋ ನಿಗೂಢತೆ ಇದೆ ಎಂಬುದು ಸ್ಪಷ್ಟ. (ಅಸುರರು ಅನೇಕ ಬಾರಿಹುಟ್ಟಿದ್ದಕ್ಕೆ ಪ್ರಮಾಣ ಕೊಡದೇ ಊಹೆ ಮಾಡಬೇಕಾಗುತ್ತದೆ).

೪೩೦೦ ವರ್ಷಗಳ ನಂತರದ ವರ್ಷಗಳು ಎಷ್ಟು ಎಂಬುದಕ್ಕೆ ಆಧಾರಗಳು ಸರಿಯಾಗಿಲ್ಲ. ಈ ತೊಡಕು ಇರುವ ಕಾರಣವೇ ಇದುವರೆಗೆ ದೊರೆತ ಯಾವ ಮ.ಭಾ.ತಾ.ನಿ.ಯದ ವ್ಯಾಖ್ಯಾನಗಳಲ್ಲೂ ಈ ವಿಷಯದ ಪ್ರಸ್ತಾಪನೆ ಕಂಡು ಬರುವುದಿಲ್ಲ. ಎಲ್ಲ ವ್ಯಾಖ್ಯಾನಕಾರರು ಯಥಾಸ್ಥಿತಿ ಅರ್ಥೈಸಿ ಮುನ್ನಡೆ ದಿದ್ದಾರೆ. ಪ್ರಾಯಃ ಆಧುನಿಕರು ಇದನ್ನು ಗಮನಿಸಿದಂತಿಲ್ಲ.

೨. ಮ.ಭಾ.ತಾ.ನಿ. ವಾಕ್ಯವನ್ನು ಹಿಡಿದು ನಡೆದರೆ, ಇದುವರೆಗೆ ಪ್ರಚಲಿತವಿರುವ ಸಂಪ್ರದಾಯವಾಗಿ ನಡೆದುಕೊಂಡು ಬಂದಿರುವ ವಿಲಂಬಿ ಹಾಗೂ ಪಿಂಗಳ ಎಂಬ ಸಂವತ್ಸರ ಹೆಸರುಗಳನ್ನು (ಅವತಾರ ಹಾಗೂ ಅದೃಶ್ಯ) ಪೂರ್ಣ ಕೈಬಿಡಬೇಕಾಗುತ್ತದೆ. ಉಡುಪಿಯ ಅಷ್ಟ ಮಠಗಳ ಕೈಫಿಯತ್ತು ಮತ್ತು ಶಾಸನಗಳಲ್ಲಿರುವ ಉಲ್ಲೇಖಗಳ ಮೇಲೆ ಭಾರ ಹಾಕಿ ಅವುಗಳಿಗೆ ಹೊಂದಿಕೆಯಾಗುವಂತೆ ತಮ್ಮ ನಿಲುವನ್ನು ಮುಂದಿಟ್ಟವರು ಪಂ. ಪಿ.ಎಸ್. ಶೇಷಗಿರಿ ಆಚಾರ್ಯರು ಮತ್ತು ಡಾ. ಪ್ರಭಂಜನಾಚಾರ್ಯರು. ನನ್ನ ಪ್ರಕಾರ ಇವರ ವಾದವೂ ಸಮಂಜಸವಲ್ಲ.

೩. ಒಂದು ವೇಳೆ ಸಂವತ್ಸರ ಹೆಸರುಗಳನ್ನು ಕಡೆಗಾಣಿಸಿ ನಿಗೂಢವಾದ ಮ.ಭಾ.ತಾ.ನಿ.ಯದ ವಾಕ್ಯದ ಮೇಲೆ ಭಾರ ಹಾಕುವುದಾದರೆ ೪೩೦೦ ವರ್ಷಗಳು ಎನ್ನುವುದರ ಬದಲಾಗಿ ೪೩೨೦ನೇ ವರ್ಷದಲ್ಲಿ

ಶ್ರೀಮದಾಚಾರ್ಯರ ಅವತಾರ ಎಂಬುದೇ ಹೆಚ್ಚು ಸೂಕ್ತವೆಂದು ನನ್ನ ಅಭಿಪ್ರಾಯ. ಯಾಕೆಂದರೆ –

ಪಂ. ಪಿ.ಎಸ್. ಶೇಷಗಿರಿ ಆಚಾರ್ಯರು ಹಾಗೂ ಡಾ. ಪ್ರಭಂಜನಾಚಾರ್ಯರು ಕೈಫಿಯತ್ತುಗಳ ಮತ್ತು ಶಾಸನಗಳ ಮೇಲೆ ತಮ್ಮ ನಿಲುವನ್ನು ಮಂಡಿಸಿದ್ದಾರೆ.

ಅ) ಕೈಫಿಯತ್ತುಗಳು ಅರ್ವಾಚೀನ ಉಲ್ಲೇಖಗಳು. ಅವುಗಳಲ್ಲಿ ಅಸಂಗತ ಹೇಳಿಕೆಗಳು ಹೇರಳವಾಗಿ ಉಂಟು. ಈಗಾಗಲೆ ಹಿಂದೆ ಚರ್ಚೆ ಮಾಡಿ ಇವುಗಳು (ಅಸಂಗತಗಳು) ಹೇಗೆ ನಂಬಲರ್ಹವಲ್ಲ ಎಂಬುದನ್ನು ತೋರಿಸಲಾಗಿದೆ. ಕೈಫಿಯತ್ತುಗಳನ್ನು ಅಪ್ರಾಮಾಣಿಕವೆಂದು ಸಾರಾಸಗಟಾಗಿ ತಳ್ಳಿಹಾಕಿಲ್ಲ. ಪ್ರಸ್ತುತ ವಿಷಯದಲ್ಲಿ ಸಮಂಜಸವಲ್ಲ ಎಂದು ಮಾತ್ರ ನನ್ನ ಅನಿಸಿಕೆ.

ಆ) ಶಾಸನಗಳಲ್ಲಿ ಶಕಾಂಕಗಳ ಸಂವತ್ಸರಗಳ ವ್ಯತ್ಯಾಸಗಳು ಭಿನ್ನ ಭಿನ್ನ ನಾಮಗಳು ಹೇರಳವಾಗಿ ಕಂಡು ಬರುತ್ತವೆ. ಕಾಲ ವ್ಯತ್ಯಾಸ ಮಾಡಿ ಶಾಸನಗಳಲ್ಲಿ ಉಲ್ಲೇಖಿಸಿದ್ದಕ್ಕೆ ಉದಾಹರಣೆಗಳು ತುಂಬಾ ಇರುವುದು ಗಮನಾರ್ಹ. ಶಾಸನದ ಕಾಲ ಹಾಗೂ ಆ ಕಾಲದಲ್ಲಿದ್ದ ರಾಜರ ಹೆಸರುಗಳೂ ಹೊಂದದಿರುವ ಶಾಸನಗಳು ಅನೇಕ ಇವೆ. ಪ್ರಕೃತ ಶ್ರೀಮದಾಚಾರ್ಯರು ಬದರಿ ಪ್ರವೇಶಾನಂತರವೂ ಶ್ರೀನರಹರಿತೀರ್ಥರ ಆಳ್ವಿಕೆ ಕಳಿಂಗರಾಜ್ಯದಲ್ಲಿ ಮುಂದುವರೆದಿತ್ತು ಎನ್ನಬೇಕಾದ ಪರಿಸ್ಥಿತಿ ಎದುರಿಸಬೇಕಾಗುತ್ತದೆ. ಯಾಕೆಂದರೆ ಶ್ರೀನರಹರಿತೀರ್ಥರ ಕೊನೆಯ ಶಾಸನ ಕ್ರಿ.ಶ. ೧೨೯೪. ಆದರೆ ಪಂ. ಪಿ.ಎಸ್. ಶೇಷಗಿರಿ ಆಚಾರ್ಯರ ಪ್ರಕಾರ ಆಚಾರ್ಯರ ಬದರೀ ಪ್ರವೇಶ ಕ್ರಿ.ಶ. ೧೨೭೦ ಮತ್ತು ಡಾ. ಪ್ರಭಂಜನಾಚಾರ್ಯರ ಪ್ರಕಾರ ಕ್ರಿ.ಶ. ೧೨೮೦.

ಒಟ್ಟಿನಲ್ಲಿ ಕೈಫಿಯತ್ತು ಹಾಗೂ ಶಾಸನಗಳನ್ನು ಆಚಾರ್ಯರ ವಾಕ್ಯಕ್ಕೆ ಹೊಂದಿಸಲು ನಡೆದ ಪ್ರಯತ್ನ ಸಮಂಜಸವಾಗಿ ಕಾಣುತ್ತಿಲ್ಲ.

ನನ್ನ ಅಭಿಪ್ರಾಯವಾದ ಕಲಿಯುಗದ ೪೩೨೦ಕ್ಕೆ ಆಚಾರ್ಯರ ಅವತಾರ ಎಂಬುದಕ್ಕೆ ಆಧಾರಗಳು ಋಗ್ವೇದದ ವಾಕ್ಯ ಮ.ಭಾ.ತಾ.ನಿ.ಯದ ವಾಕ್ಯ , ಇವೆರಡಕ್ಕೂ ಸಮನ್ವಯ ಮಾಡಿರುವ ಪ್ರಾಚೀನ ವ್ಯಾಖ್ಯಾನಕಾರರಾದ ಶ್ರೀವೈಶ್ವನಾಥೀಯ ನಾರಾಯಣ ಪಂಡಿತಾಚಾರ್ಯರ ಶ್ರೀಮನ್ಮಧ್ವ ಮಂತ್ರಾರ್ಥ ಮಂಜರೀ ವಾಕ್ಯಗಳು ಹಾಗೂ ಅಣುಮಧ್ವಚರಿತ. ಅಂದರೆ ಅಪೌರುಷೇಯವಾದ ವಾಕ್ಯ . ಸರ್ವಜ್ಞರ ವಾಕ್ಯ . ಇವೆರಡರ ಸಮನ್ವಯದ ಪ್ರಾಚೀನರ ವಾಕ್ಯ . ವಾಯುಪುರಾಣದ್ದೇ ಆಗಿರುವುದಾದರೆ ಅಣುಮಧ್ವಚರಿತೆಯ ವಾಕ್ಯ . ಈ ನಾಲ್ಕೂ ಸಮಂಜಸವಾಗಿ ಒಂದಕ್ಕೊಂದು ಪೂರಕವಾಗಿವೆ ಎಂಬುದನ್ನು ಗಮನಿಸಬೇಕು.

ಮ.ಭಾ.ತಾ.ನಿ.ವಾಕ್ಯದ ನಿಗೂಢತೆಯನ್ನು ಬಹಿರಂಗ ಪಡಿಸಲು ಮೊಟ್ಟ ಮೊದಲು ಪ್ರಯತ್ನಿಸಿದ ಶ್ರೇಯಸ್ಸು ಶ್ರೀ ವೈಶ್ವನಾಥೀಯ ನಾರಾಯಣ ಪಂಡಿತಾಚಾರ್ಯರಿಗೆ ಸಲ್ಲುತ್ತದೆ. ''ಚತುಃಸಹಸ್ರೇ ತ್ರಿಶತೋತ್ತರೇ ಗತೇ'' ಎಂಬ ವಾಕ್ಯವನ್ನು ವೇದವಾಕ್ಯದ ಹಿನ್ನೆಲೆಯಲ್ಲಿ ಬಿಡಿಸಿಟ್ಟು ಮಹೋಪಕಾರ ಮಾಡಿದ್ದಾರೆ. ಮ.ಭಾ.ತಾ.ನಿ.ಯದ ವಾಕ್ಯದ ಹಿನ್ನೆಲೆಯಲ್ಲಿ ಹೊಸಬೆಳಕನ್ನು ನಿಜವಾಗಿಯೂ ಚಲ್ಲಿದವರು ಇವರೇ. ಹೀಗಾಗಿ ಈ ವಿಷಯ ಹೊಸದಾಗಿ ಪಂ.ಶೇಷಗಿರಿ ಆಚಾರ್ಯರಾಗಲಿ, ಡಾ. ಪ್ರಭಂಜನಾಚಾರ್ಯರಾಗಲೀ, ನಮ್ಮ ಮುಂದಿಟ್ಟದ್ದಲ್ಲ. ನಮ್ಮ ನಿಲುವಿಗಿಂತ ಪ್ರಾಚೀನರ ಪ್ರಾಮಾಣಿಕ ವಿಚಾರಗಳ ಮೇಲೆ ನಿಲ್ಲುವುದು ಹೆಚ್ಚು ಸೂಕ್ತ. ಶ್ರೀ ವೈಶ್ವನಾಥೀಯ ನಾರಾಯಣಾಚಾರ್ಯರು ತಮ್ಮ ಗ್ರಂಥದಲ್ಲಿ

अभिद्विजन्मा त्रिवृदन्नमृज्यते ।<br>
संवत्सरे वावृधे जग्धमी पुनः ।

ಈ ಋಗ್ವೇದ ಮಂತ್ರ ಆಚಾರ್ಯರ ಅವತಾರ ಕಾಲವನ್ನು ತಿಳಿಸಲು ಹೊರಟಿದೆ. ಇಲ್ಲಿರುವ 'ಅಭಿ' ಶಬ್ದಕ್ಕೆ ಅಭ್ಯರ್ಹಿತವಾದ ಬ್ರಾಹ್ಮಣ ಜನ್ಮ ಮತ್ತು ''ಅಭಿ ಸಂವತ್ಸರೇ ತ್ರಿವೃತ್'' ಎಂಬುದಕ್ಕೆ ಅಭ್ಯರ್ಹಿತವಾದ ದೇವಮಾನದ ಹಿನ್ನೆಲೆಯಲ್ಲಿ, ದ್ವಿಜನ್ಮದ ಪ್ರಾಪ್ತಿ ೮ನೇ ವರ್ಷಕ್ಕೆ ಎಂಬುದಕ್ಕೆ ''ಅಷ್ಟವರ್ಷಂ ಬ್ರಾಹ್ಮಣಮುಪನಯೇತ್'' ಎಂಬ ಶ್ರುತಿಯನ್ನು ಉದಾಹರಿಸಿ 'ತ್ರಿವೃತ್'ಶಬ್ದದಿಂದ ಮೂರು ವರ್ಷದ ನಂತರ ಎಂದು ಅರ್ಥೈಸಿ (೮+೩=೧೧ +೧=೧೨) ದೇವಮಾನದ ೧೨ ವರ್ಷಕ್ಕೆ ಸರಿಯಾಗಿ (೩೬೦ X ೧೨) ೪೩೨೦ ಮಾನವ ವರ್ಷಗಳೆಂದು ತಿಳಿಸಿ ಇದನ್ನೇ ಮ.ಭಾ. ತಾ.ನಿ.ದಲ್ಲಿ ಆಚಾರ್ಯರು ''ಚತುಃಸಹಸ್ರೇ ತ್ರಿಶತೋತ್ತರೇ ಗತೇ'' ಎಂಬಲ್ಲಿ ಸೂಚಿಸಿದ್ದಾರೆಂದು ಅವರು ಸಮನ್ವಯಿಸುವ ರೀತಿ ರೋಮಾಂಚನ ಗೊಳಿಸುತ್ತದೆ.

ಮಹಾಭಾರತತಾತ್ಪರ್ಯ ನಿರ್ಣಯದಲ್ಲಿರುವ ''ಚತುಃಸಹಸ್ರೇ ತ್ರಿಶತೋತ್ತರೇ ಗತೇ'' ಮೊದಲಾದ ಶ್ಲೋಕಗಳ ಹಿಂದುಮುಂದಿನ ಶ್ಲೋಕ ಗಳನ್ನು ಗಮನಿಸಿದಾಗ ಶ್ರೀಮದಾಚಾರ್ಯರು, ಅನೇಕ ಶ್ರುತಿಗಳನ್ನು ಕೊಟ್ಟು ಆ ಶ್ರುತಿಗಳ ಹಿನ್ನೆಲೆಯಲ್ಲಿ ತಮ್ಮ ಮೂಲ ರೂಪಾದಿಗಳ ನಿರ್ಣಯವನ್ನು ಮಾಡಿರುತ್ತಾರೆ. ಹೀಗಾಗಿ ತಮ್ಮ ಅವತಾರಕಾಲದ ಬಗ್ಗೆ ತಿಳಿಸುವಾಗಲು ಶ್ರುತಿಮೂಲ ಇರಲೇಬೇಕು ಎನಿಸುತ್ತದೆ. ಪ್ರಸಂಗವೂ ಹಾಗೇ ಇದೆ.ಈ ಹಿನ್ನೆಲೆಯಲ್ಲು ಶ್ರೀವೈಶ್ವನಾಥೀಯ ನಾರಾಯಣಾ ಚಾರ್ಯರ ವಿವರಣೆ ಹೆಚ್ಚು ಸಮಂಜಸ ಎನಿಸುತ್ತದೆ. ಇದು ಅತ್ಯಂತ ಗಮನಾರ್ಹವಾದ ವಿಷಯ.

೪. ಡಾ. ಪ್ರಭಂಜನಾಚಾರ್ಯರು ತೋರಿಸುವ ಅನೇಕ ಆಪತ್ತಿಗಳು ನನ್ನ ಅಭಿಪ್ರಾಯವಾದ ಕ್ರಿ.ಶ. ೧೨೨೦-೧೩೯ ಎಂಬುದಕ್ಕೆ ಬರುವುದಿಲ್ಲ. ಶ್ರೀಮದಾಚಾರ್ಯರ ಕಾಲವನ್ನು ಪ್ರಾಚೀನರ ವಾಕ್ಯದ ಹಿನ್ನೆಲೆಯಲ್ಲಿ

ಹಾಗೂ ಮ.ಭಾ.ತಾ.ನಿ.ಯದ ಹಿನ್ನೆಲೆಯಲ್ಲಿ ಕ್ರಿ.ಶ. ೧೨೨೦-೧೨೯೯ ಎಂದು ಒಪ್ಪಿದರೆ ಅನೇಕ ಸಮಕಾಲೀನ ದಾಖಲೆಗಳನ್ನೂ ಹೊಂದಿಸ ಬಹುದಾಗಿದೆ -

## (I) ಶ್ರೀನರಹರಿತೀರ್ಥರ ಕೊನೆಯ ಶಾಸನ

ಶ್ರೀ ನರಹರಿತೀರ್ಥರ ಕೊನೆಯ ಶಾಸನ ಕ್ರಿ.ಶ. ೧೨೯೪ ರದ್ದು. ಶ್ರೀಮದಾಚಾರ್ಯರ ಕಾಲವನ್ನು ಡಾ. ಪ್ರಭಂಜನಾಚಾರ್ಯರ ಮತ್ತು ಪಂ. ಪಿ.ಎಸ್. ಶೇಷಗಿರಿ ಆಚಾರ್ಯರ ಪ್ರಕಾರ ಕ್ರಿ.ಶ. ೧೨೦೦ - ೧೨೮೦ ಮತ್ತು ೧೨೦೦ - ೧೨೭೦ ಎಂದು ಸ್ವೀಕರಿಸಿದರೆ, ಶ್ರೀಮದಾಚಾರ್ಯರು ಬದರೀ ಪ್ರವೇಶ ಮಾಡಿದ ನಂತರವೂ ಶ್ರೀ ನರಹರಿತೀರ್ಥರು ಕಳಿಂಗ ದೇಶವನ್ನಾಳುತ್ತಿದ್ದರು ಎಂದಾಗುತ್ತದೆ. ಆ ದೇಶಕ್ಕೆ ಬಂದ ಆಪತ್ತನ್ನು ಪರಿಹರಿಸಿ ಮೂಲ ಸೀತಾರಾಮರ ಪ್ರತಿಮೆಗಳನ್ನು ತಂದು ಆಚಾರ್ಯರಿಗೆ ಒಪ್ಪಿಸಿದ ನಂತರ (ಶ್ರೀಪದ್ಮನಾಭತೀರ್ಥರ ಮೂಲಕ) ಮತ್ತೆ ಕಳಿಂಗ ದೇಶವನ್ನುಆಳುವ ಪ್ರಸಂಗ ಹೊಂದುವುದಿಲ್ಲ. ಆದರೆ ನನ್ನ ಅಭಿಪ್ರಾಯವಾದ ಕ್ರಿ.ಶ. ೧೨೨೦ - ೧೨೯೯ ಎಂದಿಟ್ಟುಕೊಂಡರೆ ಶ್ರೀ ನರಹರಿತೀರ್ಥರ ಕ್ರಿ.ಶ. ೧೨೯೪ರ ಕೊನೆಯ ಶಾಸನವು ಸರಿಯಾಗಿ ಹೊಂದುತ್ತದೆ.

## (II) ಶ್ರೀ ಪದ್ಮನಾಭತೀರ್ಥರ ಬೇಲೂರಿನ ಶಾಸನ

ಶ್ರೀ ಪದ್ಮನಾಭ ತೀರ್ಥರ ಬೇಲೂರಿನ ಶಾಸನದ ಕಾಲ ಕ್ರಿ.ಶ. ೧೨೭೭ (ಶಾ.ಶ.೧೯೯). ನನ್ನ ಅಭಿಪ್ರಾಯದ ಕ್ರಿ.ಶ. ೧೨೨೦-೧೨೯೯ ಕ್ಕೆ ಈ ಶಾಸನವೂ ಸರಿಹೊಂದುತ್ತದೆ.

## (III) ಶ್ರೀ ಸುಬ್ರಹ್ಮಣ್ಯ ಮಠದ ದಾಖಲೆ

ಶ್ರೀ ಸುಬ್ರಹ್ಮಣ್ಯ ಮಠದಲ್ಲಿನ ಪ್ರಾಚೀನ ದಾಖಲೆಯಲ್ಲಿ ಕಲಿಯುಗದ ೪೩೪೦ಕ್ಕೆ ಸರಿಯಾಗಿ ಸುಬ್ರಹ್ಮಣ್ಯ ಮಠದಲ್ಲಿ ನೆಲೆಸಿದ್ದ ಭಟ್ಟಾಚಾರ್ಯ

ಎಂಬ ಅದ್ವೈತಿಯು ಶ್ರೀಮದಾಚಾರ್ಯರೊಂದಿಗೆ ವಾದದಲ್ಲಿ ಸೋತು ಆ ಮತವನ್ನು ಒಪ್ಪಿಸಿದ ವಿವರಗಳಿವೆ. ತಾಳೆಗರಿ ಪತ್ರದಲ್ಲಿ ಈ ಉಲ್ಲೇಖ ಉಂಟೆಂಬ ವಿಷಯವನ್ನು ಪಂ.ಪಿ.ಎಸ್. ಶೇಷಗಿರಿ ಆಚಾರ್ಯರು ತತ್ವವಾದ ಪತ್ರಿಕೆಯ ಅಕ್ಟೋಬರ್ ೧೯೯೭ ರಲ್ಲಿ ತಿಳಿಸಿದ್ದಾರೆ. ಇದರಲ್ಲಿ ಸಂವತ್ಸರದ ಹೆಸರು ''ಸಿದ್ಧಾರ್ಥಿ'' ಎಂದಿದೆ. ಇದು ಕಲಿಯುಗದ ೪೩೪೦ (ಕ್ರಿ.ಶ. ೧೨೪೦) ಕ್ಕೆ ಸರಿಹೊಂದುವುದಿಲ್ಲ. ''ಇಂತಹ ತಪ್ಪುಗಳು ಶಾಸನಗಳಲ್ಲಿ ಹಾಗೂ ಪ್ರಾಚೀನ ದಾಖಲೆಗಳಲ್ಲಿ ತೀರಾ ಸಂಭಾವಿತ'' ಎಂದು ಹೇಳಿ ೪೩೪೦ ಎಂಬ ಸಂಖ್ಯೆಯನ್ನು ಪೂರ್ಣ ಕೈಬಿಟ್ಟು 'ಸಿದ್ಧಾರ್ಥೀ' ಎಂಬುದನ್ನೇ ಹಿಡಿದು ಅದಕ್ಕೆ ಹೊಂದುವ ಕ್ರಿ.ಶ. ೧೨೫೯ತ್ತೇ ಸರಿ ಎಂಬ ಪಂ. ಪಿ.ಎಸ್.ಶೇಷಗಿರಿ ಆಚಾರ್ಯರವರ ನಿಲುವನ್ನು ಡಾ. ಪ್ರಭಂಜನಾಚಾರ್ಯರು ಹೆಚ್ಚು ಸೂಕ್ತವೆಂದು ಅನುಮೋದಿಸಿದ್ದಾರೆ. ಶಾಸನಗಳಲ್ಲಿ ತಪ್ಪುಗಳು ತೀರಾ ಸಂಭಾವಿತ ಎಂದು ಒಪ್ಪಿಕೊಳ್ಳುವ ಹಾಗೂ ತಮ್ಮ ನಿಲುವುಗಳಿಗೆ ಸಂವತ್ಸರಗಳ ಹೆಸರುಗಳನ್ನು ಪೂರ್ಣ ಕೈಮಿಟ್ಟಿರುವ ಇವರುಗಳು ಇಲ್ಲಿ ಮಾತ್ರ ಸಂಖ್ಯೆಯನ್ನು ಕಡೆಗಾಣಿಸಿ ಸಂವತ್ಸರ ಹೆಸರನ್ನು ತೆಗೆದುಕೊಂಡಿದ್ದಾರೆ. ಯಾಕೆಂದರೆ ತಮ್ಮ ನಿಲುವಿಗೆ ಸರಿ ಹೊಂದಿಸುವುದೇ ಗುರಿಯಾಗಿದೆ. ಆದರೆ ನಾನು ನನ್ನ ಅಭಿಪ್ರಾಯಕ್ಕೆ ಎಲ್ಲೂ ಸಂವತ್ಸರಗಳ ಗೋಜಿಗೆ ಹೋಗದೆ ಕೇವಲ ಸಂಖ್ಯೆಗಳಿಗೆ ಅಂಟಿಕೊಂಡಿದ್ದೇನೆ. ಯಾಕೆಂದರೆ ನಾನು ಆಧರಿಸಿರುವ ಋಗ್ವೇದ ಮಂತ್ರ, ಮ.ಭಾ.ತಾ.ನಿ. ಪ್ರಾಚೀನ ವ್ಯಾಖ್ಯಾನಕಾರರ ವಾಕ್ಯಗಳಲ್ಲಿ ಸಂವತ್ಸರಗಳನ್ನು ಸೂಚಿಸಿಯೇ ಇಲ್ಲ. ಸುಬ್ರಹ್ಮಣ್ಯ ಮಠದ ದಾಖಲೆಯಲ್ಲಿ ಸ್ಪಷ್ಟವಾಗಿ ೪೩೪೦ ಎಂದಿರುವುದು ನನ್ನ ಅಭಿಪ್ರಾಯಕ್ಕೆ ಅನುಗುಣವಾಗಿಯೇ ಇದೆ. ನನ್ನ ಅಭಿಪ್ರಾಯ ಪ್ರಕಾರ ಆಚಾರ್ಯರ ಅವತಾರ ಕಾಲ ೪೩೨೦. ಈ ಮಠದ ದಾಖಲೆ ೪೩೪೦. ಅಂದರೆ ಆಗ ಶ್ರೀಮದಾಚಾರ್ಯರಿಗೆ ೨೦ ವರ್ಷಗಳು. ಶ್ರೀಮಧ್ವವಿಜಯದಲ್ಲಿ ಶ್ರೀಮದಾಚಾರ್ಯರನ್ನು ವೇದಾಂತ ಸಾಮ್ರಾಜ್ಯದಲ್ಲಿ ಅಭಿಷೇಕಿಸುವುದಕ್ಕಿಂತ

ಮುಂಚೆ ಹಾಗೂ ಅನಂತರ ಉಡುಪಿಯ ಸುತ್ತಮುತ್ತ ಇರುವ ಅನೇಕ ವಾದಿಗಳನ್ನು ಜಯಿಸಿದ್ದರ ಉಲ್ಲೇಖ ಉಂಟು.

ಶ್ರೀಮದಾಚಾರ್ಯರ ಅವತಾರ ಕಾಲವನ್ನು ಕ್ರಿ.ಶ.೧೨೩೮ ಎಂದು ಒಪ್ಪುವವರಿಗೆ ಈ ದಾಖಲೆಯನ್ನುಹೊಂದಿಸಲು ಸಾಧ್ಯವಾಗುವುದೇ ಇಲ್ಲ. ಈ ಮಠದ ದಾಖಲೆ ಪ್ರಕಾರ ೪೩೪೦ ಅಂದರೆ ಕ್ರಿ.ಶ. ೧೨೪೦. ಆಚಾರ್ಯರ ಅವತಾರ ಕ್ರಿ.ಶ. ೧೨೩೮ ಎಂದಾದರೆ ಆಗ ಶ್ರೀಮದಾಚಾರ್ಯರಿಗೆ ಕೇವಲ ೨ ವರ್ಷ ಮಾತ್ರ.

## (IV) ಶ್ರೀಸುಬ್ರಹ್ಮಣ್ಯ ಮಠದ ತಾಮ್ರಶಾಸನ

ಈ ಶಾಸನ ಕ್ರಿ.ಶ. ೧೨೬೨ (ಶಾ.ಶ.೧೧೯೪)ರ ಕಾಲಕ್ಕೆ ಸೇರಿದ್ದು. ಇದು ಶ್ರೀಮದಾಚಾರ್ಯರ ತಮ್ಮಂದಿರಾದ ಶ್ರೀವಿಷ್ಣುತೀರ್ಥರ ಶಿಷ್ಯರಾದ ಶ್ರೀ ಅನಿರುದ್ಧತೀರ್ಥರಿಗೆ ಆಗಿನ ಕಾಲದ ರಾಜ ಸುಬ್ಬಯ್ಯ ಬಲ್ಲಾಳನು ಕೊಟ್ಟ ಶಾಸನ. ನನ್ನ ಅಭಿಪ್ರಾಯದಂತೆ ಕ್ರಿ.ಶ. ೧೨೨೦ ಆಚಾರ್ಯರ ಅವತಾರ. ಅಂದರೆ ಈ ಶಾಸನದ ವೇಳೆಗೆ ಶ್ರೀಮದಾಚಾರ್ಯರಿಗೆ ೫೨ ವರ್ಷಗಳಾಗುತ್ತವೆ. ಆ ವೇಳೆಗೆ ಶ್ರೀವಿಷ್ಣುತೀರ್ಥರಿಗೆ ಪ್ರಶಿಷ್ಯರಿರುವ ಸಂಭವ ಅವಶ್ಯ ಉಂಟು.

## (V) ನಿಂಬಾರ್ಕಾಚಾರ್ಯರ ಕಾಲ

''ನಿಂಬಾರ್ಕಾಚಾರ್ಯರ ಕಾಲದ ಉತ್ತರಾವಧಿಯನ್ನು ಕ್ರಿ.ಶ. ೧೨೫೦ ಎಂದು ಸಂಶೋಧಕರು ನಿರ್ಣಯಿಸಿದ್ದಾರೆ'' ಎಂದು ಡಾ. ಪ್ರಭಂಜನಾ ಚಾರ್ಯರು ಉಲ್ಲೇಖಿಸಿದ್ದಾರೆ. ಉತ್ತರಾವಧಿ ಎಂದರೆ ಕಾಲದ ಅವಧಿ ಎಷ್ಟು? ತಿಳಿಯದಾಗಿದೆ. ಆಚಾರ್ಯರ ಕಾಲದವರಾಗಿದ್ದು ಸಮವಯಸ್ಕ ರಾಗಿರುವ ಸಂಭವವಿದೆ. (ಉತ್ತರಾವಧಿ ಕ್ರಿ.ಶ. ೧೨೫೦ ಎಂದರೆ ಅದು ಶ್ರೀಮದಾಚಾರ್ಯರ ಉತ್ತರಾವಧಿ ಕಾಲವೂ ಆಗುತ್ತದೆ. ಒಂದು ವೇಳೆ

ಆಚಾರ್ಯರ ಅವತಾರ ಕ್ರಿ.ಶ. ೧೨೦೦ ಎಂದು ಒಪ್ಪಿದರೆ). ಹಾಗಾದರೆ ಶ್ರೀಮದಾಚಾರ್ಯರ ಭೇಟಿಯಾಕಾಗಲಿಲ್ಲ?

ತುಂಬಾ ದೂರವಿದ್ದರು ಎನ್ನುವುದಾದರೆ ಆಚಾರ್ಯರಿಂದ ಅವರ ಗ್ರಂಥಗಳಿಂದ ಪ್ರಭಾವಿತರಾದದ್ದು ಹೇಗೆ ? ಈ ವಿಷಯದಲ್ಲಿ ಉಲ್ಲೇಖ ಗಳೇನಾದರೂ ಉಂಟೋ? ಏಕಾಭಿಪ್ರಾಯ ಉಳ್ಳ ಅನೇಕ ದಾರ್ಶನಿಕ ರಿರುವುದು ಅನೇಕ ಕಡೆ ಕಂಡಿದೆ. (ಕೆಲವು ವಿಷಯಗಳ ಬಗ್ಗೆ).

ಸರಿ., ನಿಂಬಾರ್ಕಾಚಾರ್ಯರ ಉತ್ತರಾವಧಿ ಕ್ರಿ.ಶ. ೧೨೫೦ ಎಂದಿಟ್ಟು ಕೊಂಡರೂ ನನ್ನ ಅಭಿಪ್ರಾಯವಾದ ಕ್ರಿ.ಶ. ೧೨೨೦ – ೧೨೯೯ ಎಂಬುದಕ್ಕೆ ಇದೂ ಸರಿಹೊಂದುತ್ತದೆ.

## (VI) ಕಣ್ವತೀರ್ಥದಲ್ಲಿ ಶ್ರೀಮದಾಚಾರ್ಯರು :

ಸಮುದ್ರಸ್ನಾನಕ್ಕೆ ತೆರಳುವ ಮುನ್ನ (ಸೂರ್ಯ ಗ್ರಹಣ ಕಾಲದಲ್ಲಿ) ಇಲ್ಲಿ ಮುಳುಗು ಹಾಕಿದ ಉಲ್ಲೇಖ ಶ್ರೀಮಧ್ವ ವಿಜಯದಲ್ಲುಂಟು. ಕ್ರಿ.ಶ. ೧೨೭೮ರಲ್ಲಿ ಪೂರ್ಣ ಸೂರ್ಯಗ್ರಹಣವಾಗಿದ್ದ ಮಾಹಿತಿ Accult-4 ಅಂತರ್ಜಾಲ ಮಾಹಿತಿಯಿಂದ ತಿಳಿದು ಬಂದಿದೆ. ಇದೂ ಸಹ ನನ್ನ ಅಭಿಪ್ರಾಯಕ್ಕೆ ಸರಿಹೊಂದುತ್ತದೆ. ಆದರೆ ಪಂ.ಶೇಷಗಿರಿ ಆಚಾರ್ಯರ ಕ್ರಿ.ಶ. ೧೨೦೦ – ೧೨೭೦ ಎಂಬ ನಿಲುವಿಗೆ ಇದು ಸರಿ ಹೊಂದುವುದಿಲ್ಲ. ಅದರಂತೆ ಕೈಫಿಯತ್ತಿನಲ್ಲಿ ದಾಖಲಿಸಿರುವ ಆಚಾರ್ಯರ ಬದರಿಕಾಶ್ರಮ ಗಮನ ಕ್ರಿ.ಶ. ೧೨೭೮ ಎಂಬುದಕ್ಕೆ ಸರಿ ಹೊಂದುವುದಿಲ್ಲ. ಇದನ್ನು ಗಮನಿಸಿಯೇ ಕೈಫಿಯತ್ತಿನ ಪರವಾಗಿ ವಾದಿಸಿದ ಡಾ. ಪ್ರಭಂಜನಾ ಚಾರ್ಯಯರು ಕೈಫಿಯತ್ತಿನ ದಾಖಲೆಗಿಂತ ಭಿನ್ನವಾಗಿ ಕ್ರಿ.ಶ. ೧೨೮೦ ಆಚಾರ್ಯರ ಬದರೀ ಗಮನ ಎಂಬ ನಿಲುವನ್ನು ಹೊಂದಿದ್ದಾರೆ.

## (VII) ಪೂರ್ಣಬೋಧ ಗುರುವಂಶ ಕಥಾಕಲ್ಪತರು

ಈ ಗ್ರಂಥದ ಶ್ಲೋಕದ ಪಾಠ (ಡಾ. ಪ್ರಭಂಜನಾಚಾರ್ಯರ ಸಂಗ್ರಹದ ಹಸ್ತ ಪ್ರತಿಯಲ್ಲಿನ ಪಾಠ ದಂತೆ) ಹೀಗಿದೆ –

**ಕಾಲೇ ಗತೇ ನವ ಕು ಬ್ರಾಹ್ಮ ಸಮುದ್ರ ತುಲ್ಯ ।**
**ವರ್ಷೈರ್ಮಿತೇ ಕಲಿಯುಗಾಗಮನಾಚ್ಚ ತತ್ರ ॥**

ಇದರ ಪ್ರಕಾರ ನವ = ೯, ಕು=೧, ಬ್ರಹ್ಮ = ೩ (ವೇದಗಳು) ಸಮುದ್ರ =೪. ಅಂಕಾನಾಂ ವಾಮತೋ ಗತಿಃ ಎಂದಿರುವುದರಿಂದ ೪೩೧೯. ಗತೇ ಶಬ್ದ ವಿರುವುದರಿಂದ ೪೩೨೦. ಅಂದರೆ ಕ್ರಿ.ಶ.೧೨೨೦. ನನ್ನ ಅಭಿಪ್ರಾಯಕ್ಕೆ ಸರಿಹೊಂದುವ ಅವತಾರ ಕಾಲ. ಈ ಗ್ರಂಥದಲ್ಲಿರುವ ಇತರ ಶ್ಲೋಕಗಳ ಅಭಿಪ್ರಾಯ ಹೊಂದಿಸಲು ಕಷ್ಟಸಾಧ್ಯ. ಆದರೆ ಶುದ್ಧ ಪ್ರತಿ ಸಿಗುವವರೆಗೆ ಏನನ್ನೂ ಹೇಳಲಾಗದು.

## (VIII) ವಾಯು ಪುರಾಣೋಕ್ತ ಅಣುಮಧ್ವಚರಿತ

ಈ ಪುಟ್ಟ ಗ್ರಂಥದಲ್ಲಿನ ಶ್ಲೋಕದ

**ತ್ರಿಶತಾಬ್ದೋತ್ತರ ಚತುಃ ಸಹಸ್ರಾಬ್ದೇಭ್ಯ ಉತ್ತರೇ ।**
**ಏಕೋನವಿಂಶತಿ ತಮೇ ವಿಲಂಬಿ ಪರಿವತ್ಸರೇ ॥**

ಎಂಬ ಪಾಠದಂತೆ ೪೦೦೦ + ೩೦೦ + ೧೯ = ೪೩೧೯ ಉತ್ತರೇ ಎಂದಿರುವುದರಿಂದ ೪೩೧೯ + ೧ = ೪೩೨೦. ಅಂದರೆ ಕ್ರಿ.ಶ. ೧೨೨೦. ಇದೂ ನನ್ನ ಅಭಿಪ್ರಾಯಕ್ಕೆ ಪೋಷಕವಾಗಿದೆ.

ಇಲ್ಲಿ ಕೆಲವೆಡೆ ನನ್ನ ಅಭಿಪ್ರಾಯಕ್ಕೆ ಸರಿ ಹೊಂದಬಹುದಾದ ಪಾಠವನ್ನು ಮಾತ್ರ ಸ್ವೀಕರಿಸಿದ್ದೇನೆ. ಅದೂ ಸಹ ಮೂಲವಾದ ವೇದ, ಮ.ಭಾ.ತಾ.ನಿ. ಇವೆರಡರ ಸಮನ್ವಯದ ಪ್ರಾಚೀನ ವ್ಯಾಖ್ಯಾನಕಾರರ ನಿಲುವಿನ

ಹಿನ್ನೆಲೆಯಲ್ಲಿ. ''ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ'' ಎಂದಂತೆ ವೇದ ಹಾಗೂ ಮ.ಭಾ.ತಾ.ನಿ.ಯಕ್ಕೆ ಹೊಂದುವ ಅಂಶಗಳನ್ನೆಲ್ಲ ಸ್ವೀಕರಿಸಬಹುದಾಗಿದೆ.

ದೊರೆತ ಮಾಹಿತಿಗಳಲ್ಲಿ ಹೆಚ್ಚು ಸೂಕ್ತ ಎನ್ನಿಸಿದ್ದನ್ನು ಯುಕ್ತಿಯುಕ್ತವಾಗಿಡಲು ಪ್ರಯತ್ನಿಸಿದ್ದೇನೆ. ಇದು ನಿರ್ಣಯವಲ್ಲ.

ಶ್ರೀಮದಾಚಾರ್ಯರು ಮ.ಭಾ.ತಾ.ನಿ.ದಲ್ಲಿ ಎರಡು ಬಾರಿ ಪ್ರಯೋಗಿಸಿರುವ ವಾಕ್ಯದ ನಿಗೂಢತೆಯನ್ನು ಅರಿಯುವವರೆಗೆ ನಿರ್ಣಯ ಕಷ್ಟಸಾಧ್ಯ. ಅದರಂತೆ ಶ್ರೀ ನರಹರಿತೀರ್ಥರ ಬಗ್ಗೆ ಉಲ್ಲೇಖಗಳಿರುವ ಶಾಸನಗಳು ಸುಮಾರು ೩೦ ವರ್ಷಗಳ ಅವಧಿಯಲ್ಲಿ ಸಿಗುತ್ತವೆ. ಹೀಗಾಗಿ ಶ್ರೀನರಹರಿತೀರ್ಥರು ೧೨ ವರ್ಷ ಮಾತ್ರ ರಾಜ್ಯವಾಳಿದರು ಎಂಬ ಅಂಶದ ಬಗ್ಗೆಯೂ ವಿಚಾರ ಮಾಡಬೇಕಾಗುತ್ತದೆ. ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

# ಹಿನ್ನುಡಿ

ಇತಿಹಾಸದ ಸಂಶೋಧನೆ ತುಂಬ ಕ್ಲಿಷ್ಟಕರ. ಸಮಕಾಲೀನ ದಾಖಲೆಗಳ ಅನುಪಲಬ್ಧಿ ಇದ್ದಾಗ ಎದುರಾಗುವ ಸಮಸ್ಯೆ ಗುರುತರವಾದದ್ದು. ಸಂಶೋಧನೆಯಲ್ಲಿ ತೊಡಗಿ ತಮ್ಮ ನಿಲುವನ್ನು ಸಮಾಜದ ಮುಂದಿಟ್ಟಾಗ ಅದರ ಬಗ್ಗೆ ವಿಮರ್ಶಿಸುವುದು ಟೀಕಿಸುವುದು ಸುಲಭದ ಕೆಲಸ. ಆದರೆ ಸಂಶೋಧನೆಯ ಪರಿಶ್ರಮ ಅದರಲ್ಲಿ ಪ್ರಾಮಾಣಿಕವಾಗಿ ತೊಡಗಿದವರಿಗೇ ಅರಿವಾಗಬಲ್ಲದು.

ಈ ನನ್ನ ವಿಮರ್ಶಾತ್ಮಕ ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಕೆಲ ವಿದ್ವಾಂಸರ ಅಭಿಪ್ರಾಯಗಳನ್ನು ವಿಮರ್ಶಿಸಿದ್ದೇನೆ. ಆ ವಿದ್ವಾಂಸರ ಪರಿಶ್ರಮವನ್ನು ಮನಗಾಣುವ ನನಗೆ ಅವರಲ್ಲಿ ಪೂರ್ಣ ಗೌರವವಿದೆ. ಆ ವಿದ್ವಾಂಸರ ಜೊತೆ ನಿಕಟ ಸಂಬಂಧವನ್ನೂ ಹೊಂದಿದ್ದೇನೆ. ಅವರ ನಿಲುವನ್ನು ವಿಶ್ಲೇಷಿಸಿದ್ದಕ್ಕೆ ಅವರು ಸಂತೋಷಗೊಂಡು ತಪ್ಪಿದ್ದಲ್ಲಿ ತಿದ್ದಿ ನನ್ನನ್ನು ಪ್ರೋತ್ಸಾಹಿಸುವರೆಂದು ನಂಬಿದ್ದೇನೆ. ಕಾಲನಿರ್ಣಯ ವೆಂಬ ಜಟಿಲ ವಿಷಯದಲ್ಲಿ ನಾನು ಸಣ್ಣವ. ಪಾಂಡಿತ್ಯ , ಅನುಭವ, ವೈಚಾರಿಕತೆ, ಭಾಷಾ ಪ್ರೌಢಿಮೆ ಮೊದಲಾದವುಗಳಲ್ಲಿ ಅವರಿಗೆ ಸರಿದೂಗಲಾರೆ. ಆದರೂ ವಿಶ್ಲೇಷಣೆ ವಿಮರ್ಶೆ ಅನಿವಾರ್ಯ.

ಶ್ರೀಮದಾನಂದತೀರ್ಥರ ಮ.ಭಾ.ತಾ.ನಿ.ಯದ ವಾಕ್ಯವೇ ಈ ವಿಷಯದಲ್ಲಿ ಪ್ರಮಾಣ. ಅವರ ಮಾತಿನಂತೆ ೪೩೦೦ ವರ್ಷಗಳು ಕಳೆದ ಮೇಲೆಯೇ ಭೀಮಸೇನ ದೇವರು ಪುನಃ ಬ್ರಾಹ್ಮಣರಾಗಿ ಅವತರಿಸುವರು. ೪೩೦೦ ವರ್ಷ ನಂತರದ ಎಷ್ಟು ವರ್ಷಗಳನ್ನು ತೆಗೆದುಕೊಳ್ಳಬೇಕು? ೪೩೦೦, ೪೩೨೦, ೪೩೩೮, ಅಥವಾ ಇನ್ನಿತರ ಯಾವುದಾದರೂ ಕಾಲಮಾನವೋ ಎಂಬ ಪ್ರಶ್ನೆ ಎದುರಾದಾಗ ಇವುಗಳಲ್ಲಿ ಹೆಚ್ಚು ಸಮರ್ಪಕ ಯಾವುದೆಂಬುದನ್ನು ತಿಳಿಸಲು ಪ್ರಯತ್ನಿಸಿದ್ದೇನೆ.

ಈ ಸಂದರ್ಭದಲ್ಲಿ ನಾನು ಯಾವ ಊಹೆಯನ್ನು ಮಾಡಿಲ್ಲ. ಪ್ರಾಚೀನರ ವಾಕ್ಯ ಹಿಡಿದು ಹೊರಟಿದ್ದರಿಂದ ಅದೇ ನನಗೆ ಬಲ. ಆ ವಾಕ್ಯವೂ ಸಹ ಶ್ರೀಮದಾಚಾರ್ಯರ ವಾಕ್ಯ ಹಾಗೂ ವೇದವಾಕ್ಯಕ್ಕೆ ವ್ಯಾಖ್ಯಾನ ವ್ಯಾಖ್ಯೇಯ ಭಾವ ಹೊಂದಿರುವುದರಿಂದ ಅತ್ಯಂತ ಪ್ರಬಲ. ಇದಕ್ಕೆ ಪೋಷಕವಾಗುವ ಇನ್ನಿತರ ಎಲ್ಲ ಆಧಾರಗಳು ಗ್ರಾಹ್ಯವೆಂಬುದು ನನ್ನ ನಿಲುವು.

ಜನಸಾಮಾನ್ಯರಲ್ಲಿ ಈ ಚರ್ಚೆ ಒಣ ಹುಸಿ ಎಂದೆನಿಸಬಹುದು. ಆದರೆ ಸಂಶೋಧಕರಿಗೆ ವಿಮರ್ಶಕರಿಗೆ ಅತ್ಯಂತ ಹಸಿಯಾದ ಸಿಹಿಯಾದ ಚರ್ಚೆ ಎಂಬಲ್ಲಿ ಸಂಶಯವಿಲ್ಲ.

ವಿವಿಧ ಮಠಗಳ ದಾಖಲೆಗಳನ್ನು (ಈ ವಿಷಯದಲ್ಲಿ) ಪರಿಶೀಲಿಸಿದಾಗ ಇತಿಹಾಸದ ಬಗ್ಗೆ ಅವರಿಗಿದ್ದ ನಿಲುವು ಸ್ಪಷ್ಟ ಗೋಚರಿಸುತ್ತದೆ. ನಮ್ಮಲ್ಲಿ ಐತಿಹಾಸಿಕ ದಾಖಲೆಗಳಿಗೆ ಮಹತ್ವವನ್ನು ಕೊಡದಿರುವುದರ ಹಿನ್ನೆಲೆ ಅರ್ಥವಾಗುವುದಿಲ್ಲ. ಶ್ರೀಮಧ್ವವಿಜಯದಂತಹ ಸಮಕಾಲೀನ ಕಾವ್ಯದಲ್ಲೂ ಘಟನೆಗಳ ದಾಖಲಾತಿ ಉಂಟೇ ಹೊರತು ಕಾಲಮಾನಗಳ ಬಗ್ಗೆ ಚಕಾರವೇ ಇಲ್ಲದಿರುವುದು ಅಚ್ಚರಿಯನ್ನುಂಟು ಮಾಡುತ್ತದೆ. ಅಥವಾ ನಮಗೆ ತಿಳಿಯದಂತೆ ಗೂಢವಾಗಿರಿಸಲು ಗುಹ್ಯ ಭಾಷೆಯನ್ನು ಪ್ರಯೋಗಿಸಿರಬಹುದು. ಸಮಕಾಲೀನ ಅಲ್ಲದ ಗ್ರಂಥಗಳಲ್ಲಿನ ವಿಷಯಗಳ ಬಗ್ಗೆ ಹೇಳುವುದೇನಿದೆ!. ಈ ವಿಷಯದಲ್ಲಿ ದಿ.ಪಂ.ಆರ್.ಎಸ್. ಪಂಚಮುಖಿಯವರ ಉಲ್ಲೇಖ ಗಮನಾರ್ಹವಾಗಿದೆ – ''ಮಠದಲ್ಲಿದ್ದ ಪೀಳಿಗೆಗಳ ಮೇಲೆ ಭಾರ ಹಾಕಿ ಕಾಲ ನಿರ್ಣಯ ಮಾಡುವುದು ಯುಕ್ತವಲ್ಲ. ಇವುಗಳಲ್ಲಿ ಪರಸ್ಪರ ವ್ಯಾಹತಿ ವ್ಯತ್ಯಾಸಗಳಿರುವುದಲ್ಲದೆ. ಸಂವತ್ಸರ ನಾಮ ನಿರ್ದೇಶದಲ್ಲೂ, ಯತಿಗಳು ಜಗದ್ಗುರು ಪಟ್ಟವನ್ನು ಆಳಿದ ವರ್ಷಗಳ ಅಂಕಿಗಳಲ್ಲೂ ಐಕಮತ್ಯವಿಲ್ಲ'' . ಪಂಚಮುಖಿಯವರು ಶ್ರೀರಾಯರ

ಮಠದ ''ಶ್ಯಾಮಲ್'' ಎಂಬ ಕೋರೀಕಾಗದದ ದಾಖಲೆಯಲ್ಲಿರುವುದರ ಬಗ್ಗೆ ಹೇಳುವ ಪ್ರಸಂಗದಲ್ಲಿ ಈ ಮಾತುಗಳನ್ನಾಡಿದ್ದರೂ ಬಹುತೇಕ ಮಠಗಳಲ್ಲಿ ಇಂತಹದ್ದೇ ವಾತಾವರಣವಿರುವುದು ಕಂಡು ಬರುತ್ತದೆ. ಆದ್ದರಿಂದ ಕೆಲ ಐತಿಹಾಸಿಕ ಘಟನೆಗಳ ಬಗ್ಗೆ ಪಣ ತೊಟ್ಟು ಜಗಳವಾಡುವುದು ನಿಲ್ಲಲೆಂದು ಆಶಿಸುತ್ತೇನೆ. ಪ್ರಾಮಾಣಿಕ ಸಂಶೋಧನೆ ನಡೆಯಲೆಂದು ಕೇಳಿಕೊಳ್ಳುತ್ತೇನೆ. ಸೌಹಾರ್ದ ಪ್ರೀತಿ ವಿಶ್ವಾಸಗಳಿಗೆ ಕೊರತೆ ಆಗದಿರಲೆಂದು ಪ್ರಾರ್ಥಿಸುತ್ತೇನೆ.



ಶ್ರೀಮದಾನಂದತೀರ್ಥರ ಮ.ಭಾ.ತಾ.ನಿ.ಯದ ವಾಕ್ಯವೇ ಈ ವಿಷಯದಲ್ಲಿ ಪ್ರಮಾಣ. ಅವರ ಮಾತಿನಂತೆ ೪೩೦೦ ವರ್ಷಗಳು ಕಳೆದ ಮೇಲೆಯೇ ಭೀಮಸೇನ ದೇವರು ಪುನಃ ಬ್ರಾಹ್ಮಣರಾಗಿ ಅವತರಿಸುವರು. ೪೩೦೦ ವರ್ಷ ನಂತರದ ಎಷ್ಟು ವರ್ಷಗಳನ್ನು ತೆಗೆದುಕೊಳ್ಳಬೇಕು? ೪೩೦೦, ೪೩೨೦, ೪೩೩೮, ಅಥವಾ ಇನ್ನಿತರ ಯಾವುದಾದರೂ ಕಾಲಮಾನವೋ ಎಂಬ ಪ್ರಶ್ನೆ ಎದುರಾದಾಗ ಇವುಗಳಲ್ಲಿ ಹೆಚ್ಚು ಸಮರ್ಪಕ ಯಾವುದೆಂಬುದನ್ನು ತಿಳಿಸಲು ಪ್ರಯತ್ನಿಸಿದ್ದೇನೆ. ಈ ಸಂದರ್ಭದಲ್ಲಿ ನಾನು ಯಾವ ಊಹೆಯನ್ನು ಮಾಡಿಲ್ಲ. ಪ್ರಾಚೀನರ ವಾಕ್ಯ ಹಿಡಿದು ಹೊರಟಿದ್ದರಿಂದ ಅದೇ ನನಗೆ ಬಲ. ಆ ವಾಕ್ಯವೂ ಸಹ ಶ್ರೀಮದಾಚಾರ್ಯರ ವಾಕ್ಯ ಹಾಗೂ ವೇದವಾಕ್ಯಕ್ಕೆ ವ್ಯಾಖ್ಯಾನ ವ್ಯಾಖ್ಯೇಯ ಭಾವ ಹೊಂದಿರುವುದರಿಂದ ಅತ್ಯಂತ ಪ್ರಬಲ. ಇದಕ್ಕೆ ಪೋಷಕವಾಗುವ ಇನ್ನಿತರ ಎಲ್ಲ ಆಧಾರಗಳು ಗ್ರಾಹ್ಯವೆಂಬುದು ನನ್ನ ನಿಲುವು.